


ನಕೇವಲಾನಾಂ ಪಯಸಾಂಪ್ರಸೂತಿ
ಮವೇಹಿ ಮಾಂ ಕಾಮದುಘಾಂ ಪ್ರಸನ್ನಾಂ ॥
( ನಂದಿನೀ ) (ರಘುವಂಶ)

ಪ್ರಥಮಮುದ್ರಣ ೧೦೦೦, ಪ್ರತಿಗಳು.

ನಂಜನಗೂಡು
ಸತೀಹಿತೈಷಿಣೀ ಮಾತೃಮಂದಿರದಲ್ಲಿ
ಪ್ರಕಟಿಸಲ್ಪಟ್ಟುದು.



...ರ್ಟ ಪ್ರೆಸ್ ಬ್ರಾ..., ಕೋಟೆ, ಬೆಂಗಳೂರು ಸಿಟಿ.
೧೯೧೬.
...೦ ಕ್ರಯಂ-೬-೦

ಕರ್ಣಾಟಕ ನಂದಿನಿಯ ಪ್ರಥಮ ಸನ್ಮಾನ ಪುಸ್ತಕವು.

ಶ್ರೀ

# ಸುಮುಖೀ ವಿಜಯಂ.

## (ಹರಿಭಜನ ಗ್ರಂಥವು)

“ ಭಕ್ತ್ಯಾ ಗುರೌ ಮಯ್ಯನುಕಂಪಯಾಚ
ಪ್ರೀತಾಸ್ಮಿ ತೇ ಪುತ್ರ, ವರಂವೃಣೀಷ್ವ ।
ನಕೇವಲಾನಾಂ ಪಯಸಾಂಪ್ರಸೂತಿ
ಮವೇಹಿ ಮಾಂ ಕಾಮದುಘಾಂ ಪ್ರಸನ್ನಾಂ ॥
( ನಂದಿನೀ ) (ರಘುವಂಶ)

ಪ್ರಥಮಮುದ್ರಣ ೧೦೦೦, ಪ್ರತಿಗಳು.

ನಂಜನಗೂಡು

ಸತೀಹಿತೈಷಿಣೀ ಮಾತೃಮಂದಿರದಲ್ಲಿ
ಪ್ರಕಟಿಸಲ್ಪಟ್ಟುದು.

ಕ್ಯಾಕ್ಸ್ಟನ್ ಪ್ರೆಸ್ ಬ್ರಾಂಚ್, ಕೋಟೆ, ಬೆಂಗಳೂರು ಸಿಟಿ.
೧೯೧೬.




ಕ್ರಯಂ—೬—೦

॥ಶ್ರೀಃ॥

॥ಲಕ್ಷ್ಮೀನೃಸಿಹ್ಮಪ್ರಸನ್ನ॥

# ಸಮರ್ಪಣೆ

---

"ನಕ್ರಾಕ್ರಾಂತೇ ಕರೀಂದ್ರೇ ಮುಕುಳಿತನಯನೇ ಮೂಲಮೂಲೇತಿಖಿನ್ನೇ।
ನಾಹಂ ನಾಹಂ ನಚಾಹಂ ನಚಭವತಿ ಪುನಸ್ತಾ ದೃಶೋಮಾದೃಶೇಷು ॥
ಇತ್ಯೇವಂ ತ್ಯಕ್ತಹಸ್ತೆ ಸಪದಿಸುರಗಣೇ ಭಾವಶೂನ್ಯೇ ಸಮಸ್ತೇ ।
ಮೂಲಂಯತ್ಪ್ರಾದುರಾಸೀತ್ಸದಿಶತು ಭಗವಾನ್ ಮಂಗಳಂಸಂತತಂನಃ ॥

ಪ್ರಾತಸ್ಮರಾಮಿಭವಭೀತಿ ಮಹಾರ್ತಿಶಾಂತ್ಯೈ ।
ನಾರಾಯಣಂ ಗರುಡವಾಹನಮಬ್ಜನಾಭಮ್ ॥
ಗ್ರಾಹಾಭಿಭೂತ ಮದವಾರಣಮುಕ್ತಿ ಹೇತುಂ ।
ಚಕ್ರಾಯುಧಂ ತರುಣವಾರಿಜ ಪತ್ರನೇತ್ರಮ್ ॥"

ಅಸ್ಮದಾರಾಧ್ಯ ದೇವನೂ, ಆರ್ತತ್ರಾಣಪರಾಯಣನೂ,
ಅನಾದ್ಯನಂತ ಕಾರಣಸ್ವರೂಪನೂ, ಅರ್ಚಾವತಾ
ರನೂ ಶ್ರೀಮತ್ ಗಜಾರಣ್ಯಾ ಕ್ಷೇತ್ರಾಧಿ
ನಾಥನೂ, ಆದ ಶ್ರೀ ಪ್ರಸನ್ನ
ಲಕ್ಷ್ಮೀನೃಸಿಹ್ಮಸ್ವಾಮಿಯ
ಚರಣಾರವಿಂದಗಳಲ್ಲಿ
ಈಗ್ರಂಥಪುಷ್ಪವನ್ನು
ಅನನ್ಯ ಭಕ್ತಿಭಾವನೆಯಿಂದ
ಸಮರ್ಪಿಸಿರುವೆನು,

ಶ್ರೀಪಾದರೇಣು.

ಶ್ರೀ

# ಗ್ರಾಹಕರಲ್ಲಿ ವಿನಂತಿ.

---

ಸುಹೃದರೆ!

ದೈವವಿಲಾಸವೇ ದೊಡ್ಡದೆಂಬ ವಿಚಾರವು ಈಗಲೀಗ ನಂದಿನಿಗೆ ಚನ್ನಾಗಿ ಬೋಧೆಯಾಯಿತು. ಹೇಗೆಂದರೆ--ಮಾತೃನಂದಿನಿಯು, ಮಾತೃಮಂದಿರವನ್ನು ಸೇರಿ ತಿಂಗಳಾದರೂ ಹೊರಹೊರಡಲು ಅವಕಾಶವಿಲ್ಲದೆ, ವಿವಾಹಸಂಭ್ರಮದಲ್ಲಿ ತೊಡಕಿದ್ದು, ಒಂದೆರಡು ತಿಂಗಳು ನಿಮ್ಮ ನಿರೀಕ್ಷಾ ಭಂಗಮಾಡಿದ ದೋಷಕ್ಕೆ ಗುರಿಯಾಗಬೇಕಾಯಿತು. ಇದಕ್ಕಾಗಿ ಮತ್ತೆ ಕ್ಷಮೆಯನ್ನು ಕೇಳಬೇಕೇ ? ತಪ್ಪಿತಕ್ಕೆ ಕಪ್ಪಕಾಣಿಕೆಯಾಗಿ ನಿಮಗೆ 'ಭದ್ರಗೀತಾವಲಿ' ಯನ್ನು ಒಪ್ಪಿಸಿರುವಳಲ್ಲದೆ ಮುಂದೆಂದೂ ಹಿಂದಿನಂತೆ ತಪ್ಪಿತವನ್ನು ಮಾಡಲೊಲ್ಲೆನೆಂದು ಹಟತೊಟ್ಟು ಹುರಿಗೊಂಡು ನಿಂತಿರುವಳು. ಕೋಪಿಸದಿರಿ.

ಮಾತೃನಂದಿನಿಯು ವಿಳಂಬದಿಂದ-ಕರ್ಣಾಟಕ ನಂದಿನಿಯ ಪ್ರಕಾಶಕ್ಕೂ ಮತ್ತೆ ಒಂದೆರಡು ತಿಂಗಳ ಅವಧಿಯನ್ನು ಹೆಚ್ಚಿಸಿಕೊಳ್ಳಬೇಕಾಗಿರುವುದು. ಹೀಗೆ ಅಡಿಗಡಿಗೂ ಹಲವು ನೆವಗಳನ್ನು ಹೇಳಿ, ಕಾಲವನ್ನು ನೂಕುತ್ತಿರುವೆನೆಂದು ಹಳಿಯಬಾರದು. ಇದೇ ನಲಸಂವತ್ಸರದಿಂದಲೇ ಹೊರಟು ನಿಮ್ಮೆಲ್ಲರನ್ನೂ ಸೇವಿಸಲುತ್ಸಾಹದಿಂದ ಬರುವವಳು ! ಸಂಶಯವಿಲ್ಲ. ಆದರೆ ಒಂದು ಮಾತು.

ನಂದಿನಿಯಲ್ಲಿ ಅಭಿಮಾನಿಗಳಾಗಿರುವವರು, ಇಂದಿನ ಸುಮುಖೀ ವಿಜಯದ ಮೂಲಕ, ತಮ್ಮ ಉದಾರಾಭಿಪ್ರಾಯವನ್ನು ವ್ಯಕ್ತಪಡಿಸಿ, ಆಶ್ರಯವನ್ನು ಬಲಪಡಿಸಿದರೆ ಕೃತಕಾರ್ಯಳಾಗುವಳಲ್ಲವೆ ! ಹಾಗಾಗಲಿ.

ಇಂತಾಶಿಸುವ

ನಂದಿನಿ.

ಶ್ರೀ

# ಪ್ರಸ್ತಾವನೆ

---

ನನ್ನ ಪ್ರಿಯಭಗಿನಿಯರೇ!

ಈ ಸುಮುಖೀ ವಿಜಯವು,'' ಹತ್ತುಮಂದಿ ಪತಿವ್ರತೆಯರ ಕಥೆಗಳು'' ಎಂಬ ಒಂದು ಗ್ರಂಥದಲ್ಲಿ ಹೇಳಲ್ಪಟ್ಟಿರುವ ಎಂಟನೆಯ ಕಥೆಯಾಗಿರುವುದು. ಈ ಕಥೆಯನ್ನು ದ್ರೌಪದಿಯು ಸತ್ಯಭಾಮೆಗೆ ಹೇಳಿದ ಪಾತಿವ್ರತ್ಯಧರ್ಮಬೋಧೆಯಲ್ಲಿ ಅಡಕವಾಗಿರುವಂತೆ ಆ ಗ್ರಂಥದ ಅವತರಣಿಕೆಯಲ್ಲಿ ಹೇಳಿರುವುದು. ಆದರೆ, ಭಾರತದಲ್ಲಿ ಅದೆಲ್ಲಿರುವುದೆಂಬುದೇ ನಮಗೆ ಇನ್ನೂ ತಿಳಿದುಬಂದಿಲ್ಲ. ನನ್ನ ಬಾಲ್ಯದೆಸೆಯಲ್ಲಿ ಮಾತ್ರ ನೋಡಿದ್ದು- ಈಚಿಗೆ ನೋಡಿಲ್ಲವಾದುದರಿಂದ ಈ ಗ್ರಂಥಕ್ಕೆ ಕರ್ತರಾರೆಂಬುದನ್ನಾಗಲೀ ಪ್ರಕಾಶಕರಾರೆಂಬುದನ್ನಾಗಲೀ, ಹೇಳಲಾರೆನಾಗಿದ್ದರೂ, ಕಥೆಯು, ಸತೀಧರ್ಮಬೋಧನೆಯಿಂದ, ನಮ್ಮ ಬಾಲಕಾನಿವಹಕ್ಕೆ ಅತ್ಯುಪಯುಕ್ತವಾದುದೆಂಬುದನ್ನು ಮಾತ್ರ, ಈ ಕಥೆಗಳು ನನ್ನ ಬಾಲ್ಯವ್ಯಾಸಂಗದಲ್ಲಿ ನನ್ನ ಮನಶ್ಶಾಂತಿಗೆ ಎಷ್ಟರ ಸಹಕಾರಿಯಾಗಿತ್ತೆಂಬುದರ ಮೇಲಿಂದ ಧಾರಾಳವಾಗಿ ಹೇಳಬಲ್ಲೆನು. ಅದು ಹೇಗೂ ಇರಲಿ.

ವಿಚಾರ ಮಾಡುವೆವಾದರೆ, ನಮ್ಮಾ ಸ್ತ್ರೀಯರಿಗೆ, ಹರಿಮಹಿಮಾಪ್ರದರ್ಶಕಗಳಾದ ಸಾಧುಶಿರೋಮಣಿಗಳ ಚರಿತೆಗಳನ್ನು ಹೇಳಿ- ಕೇಳುವುದರಿಂದ ಉಂಟಾಗುವ ಸುಖಸಮಾಧಾನವು, ಮತ್ತಾವ ಕಲ್ಪಿತಕಾದಂಬರಿಗಳಿಂದಲೂ ಉಂಟಾಗಲಾರದೆಂದು ಇಲ್ಲಿ ಬೇರೆ ಹೇಳಬೇಕಾಗಿಲ್ಲ. ಹೇಗೆಂದರೆ:--

ನಿರಾಧಾರವಾದ ಕಲ್ಪಿತ ಕಾದಂಬರಿಗಳಲ್ಲಿ ವಿಷಯ ವಿಚಾರಗಳು ಎಷ್ಟೇ ರಸವತ್ತಾದ ರೀತಿಯಿಂದ ವಿಮರ್ಶಿಸಲ್ಪಟ್ಟಿರಲಿ, ಅದರಲ್ಲಿ ಎಷ್ಟು ನೀತಿಗಳು ಅಡಕವಾಗಿರಲಿ,-ಅವು ಸ್ಥಿರಪ್ರಜ್ಞೆಯನ್ನುಂಟು ಮಾಡುವಷ್ಟರ ಶಕ್ತಿಯಿಲ್ಲದೆ, ಪ್ರಕೃತಿಮಾನಕ್ಕೆ ತಕ್ಕಂತೆ ಅತ್ಯಲ್ಪಕಾಲದಲ್ಲಿ ಚಾಂಚಲ್ಯ ದೊಡನೆ ಸೇರಿ ಹೋಗಬಹುದಾಗಿದೆ. ಏಕೆನ್ನುವಿರಿ? ಸ್ತುತ್ಯರ್ಹವಾದ ಪಾತ್ರವನ್ನು ನಿರ್ದೇಶಿಸದೆ ಬರಿಯ ಕಲ್ಪನೆಯಿಂದ ಕೂಡಿರುವ ಆ ಗ್ರಂಥದ ಅವಲೋಕನದಿಂದಾಗುವ ಆನಂದೋತ್ಸಾಹಗಳು ಹರಿಚರಣ ಸೇವಾತತ್ಪರರೂ, ದಿವ್ಯಜ್ಞಾನಪರಿಪೂರ್ಣರೂ, ಪವಿತ್ರಪ್ರೇಮಮಯ ಸ್ವರೂಪರೂ ಆದ ಆರ್ಯಮಹನೀಯರ ಚರಿತ್ರೆಗಳನ್ನು ಬರೆದೋದಿ ಕೇಳು ವುದರಿಂದ ಹೊಂದಬಹುದಾದ ಸಾರಾಸಾರ ವಿಚಾರಜ್ಞತೆ, ಆತ್ಮಸ್ವರೂಪ ವಿಜ್ಞಾನಗಳೇ, ಮುಖ್ಯವಾಗಿರುವ ದೈವೀಸಂಪತ್ತಿಗೆ ಸಮಾನವೆನ್ನಿಸಲಾ ರವು. ಇದು ಸ್ವಾನುಭವಪೂರ್ವಕವಾಗಿ ಹೇಳುವ ಮಾತಲ್ಲದೆ, ಡಾಂಭಿ ಕೋಕ್ತಿಯಲ್ಲ. ಆದುದರಿಂದ ನನ್ನ ಪ್ರಿಯಸೋದರಿಯರೇ,--ನನ್ನ ಇತಿಕರ್ತವ್ಯವನ್ನು ಕುರಿತು ವಿಚಾರಮಾಡುತ್ತಿದ್ದ ನನ್ನಲ್ಲಿ ಆ ಭಗ ವಂತನು, ಸ್ವಪ್ನರೀತಿಯಲ್ಲಿ ಪ್ರಸನ್ನನಾಗಿ, ಸಾಧ್ವೀಮಣಿಯರ ಚರಿತ್ರೆಗ ಳನ್ನು ಬರೆಯಬೇಕೆಂದು ನಿರೂಪಿಸಿದುದರಮೇಲೆ, ನಾನೀ ಲೇಖನಕಾರ್ಯ ದಲ್ಲಿ ಕೈನೀಡಿ. ಆತನ ಸಂಪೂರ್ಣದಯೆಯಿಂದಲೂ, ಗುರುಹಿರಿಯರ ಆಶೀರ್ವಾದದಿಂದಲೂ, ಭ್ರಾತೃವರ್ಗೀಯರ ಸತ್ಸಹಾಯ, ಸೋದರಿ ಯರ ಸತ್ಪರಾಮರ್ಶೆಗಳಿಂದಲೂ ಇಂದು ಈ ಸುಮುಖೀ ವಿಜಯವನ್ನು ಹರಿಭಜನರೂಪವಾಗಿ ಬರೆದು ಕೃತಕಾರ್ಯಳೆನ್ನಿಸಿದೆನು.

ಭಗವತ್ಕೃಪೆಯಿಂದ ಈ ಗ್ರಂಥವು, ಹರಿಕಥಾಶ್ರವಣದಲ್ಲಿ ಉತ್ಸು ಕರಾಗಿರುವ ನಮ್ಮ ಸೋದರೀವರ್ಗದ ಜ್ಞಾನಾಭಿವೃದ್ಧಿಗೆ ಸಹಕಾರಿ ಯಾಗಿದೆಯೆಂದು ತಿಳಿದು ಬಂದರೆ, ಗ್ರಂಥವಿಲೇಖನದಲ್ಲಿ ನನ್ನನ್ನು ಬಹು ವಾಗಿ ಹುರಿಗೊಳಿಸುತ್ತಿದ್ದು ಪ್ರಯತ್ನಫಲವನ್ನು ಕೈಕೊಳ್ಳುವಷ್ಟು

ರಲ್ಲಿಯೇ ಶ್ರೀಪದವನ್ನು ಸೇರಿಹೋಗಿರುವ ನನ್ನ ಸೋದರಿಯ ಆಶಯವೂ, ನನ್ನ ಲೇಖನಪರಿಶ್ರಮವೂ ಸಾರ್ಥಕವಾದಂತೆ ಭಾವಿಸಿ, ಆನಂದಿಸುವೆನಲ್ಲದೆ, ಆ ನನ್ನ ಪ್ರಿಯಸೋದರಿಯ ಅತ್ಯಂತ ಆದರಕ್ಕೆ ಪಾತ್ರವಾಗಿದ್ದ 'ಸಾವಿತ್ರಿಯಚರಿತೆ'-- ಯಕ್ಷಗಾನಗ್ರಂಥವೂ ಸೋದರಿಯರ ಹಸ್ತವನ್ನಲಂಕರಿಸುವಂತೆ ಮಾಡಲು ಭಗವನ್ನಿರೂಪವನ್ನು ಹೊಂದಿ, ಪ್ರಯತ್ನದಲ್ಲಿ ನಿರತಳಾಗಿರುವೆನು. ಮತ್ತು ಸ್ವಾಮಿಯ ನಿಯಮಾನುಸಾರ ಈ ಸುಮುಖೀವಿಜಯಕ್ಕೆ ಮೊದಲನೆಯದಾದ ಚಂದ್ರವದನೆಯ ಕಥೆಯನ್ನು ಸತೀಹಿತೈಷಿಣಿಯು ನಾಟಕರೂಪದಿಂದ ಇಷ್ಟರಲ್ಲಿಯೇ ಪ್ರಕಾಶಪಡಿಸಲಿಕ್ಕಿರುವಳೆಂಬುದನ್ನು ತಿಳಿಸಲುಸಂತೋಷಪಡುತ್ತಿರುವೆನು.

ಮತ್ತೊಂದು ಮಾತು. ನನ್ನೀಕೃತಿರಚನೆಯಲ್ಲಿ ನನ್ನ ಅಜ್ಞಾತದೋಷದಿಂದ ಸೇರಿರಬಹುದಾದ ತಪ್ಪುಗಳನ್ನು, ಎಂದರೆ--ಯತಿ-ಗಣ-ನಿಯಮ-ವ್ಯಾಕರಣ-ಛಂದಸ್ಸುಗಳ ಅತಿಕ್ರಮದ ದೋಷಗಳಾಗಲಿ ಮತ್ತಾವಲೋಪಗಳೇ ಆಗಲಿ ಕಂಡು ಬಂದರೂ, ಆಗ್ರಹಿಸಿ ತಿರಸ್ಕರಿಸದೆ, ಸಾದರದಿಂದ ಸೂಚಿಸುವ ನಮ್ಮ ಸುಹೃತ್ತುಗಳಿಗೆ, ನಾನು ನಿರಂತರವೂ ಕೃತಜ್ಞಳಾಗಿರುವೆನೆಂದು ಮತ್ತೊಮ್ಮೆ ಹೇಳಬೇಕಾಗಿಲ್ಲವಷ್ಟೆ! ಹಾಗಿದ್ದರೆ ಇನ್ನು ನನ್ನ ಕೃತಿಯನ್ನು ಪ್ರಚಾರಪಡಿಸಲು ಸಹಕರಿಸಿದ ದೇಶಬಾಂಧವರಿಗೂ, ಪ್ರಕಾಶಪಡಿಸಲೊಪ್ಪಿದ ನಂದಿನಿ--ಹಿತೈಷಿಣಿಯರಿಗೂ, ಆಶ್ರಯವನ್ನಿತ್ತ ಮಾತೃಮಂದಿರಾವಾಸಿಗಳಿಗೂ ನನ್ನ ಧನ್ಯವಾದಗಳನ್ನರ್ಪಿಸಿ, ನಿರಂತರವೂ ನನ್ನಿಂದ ಇನ್ನೂ ಹೆಚ್ಚಾಗಿ ದೇಶಮಾತೃಸೇವೆಯನ್ನು ಮಾಡಿಸುವಂತೆ ಅನುಗ್ರಹಿಸೆಂದು ಆ ನನ್ನ ಆರಾಧ್ಯದೇವನನ್ನುಧ್ಯಾನಿಸುತ್ತ ಇಲ್ಲಿಗೆ ವಿರಮಿಸುವೆನು.

ನಳ ಸಂ|| ವೈಶಾಖ ಬಹುಳ ಪ್ರತಿಪತ್
18-5-1916 ಗುರುವಾರ

ಇತಿ

ಮೊ|| ಬೆಂಗಳೂರು.

ಶ್ರೀ ಪಾದರೇಣು.

ಶ್ರೀ

ಲಕ್ಷ್ಮೀನೃಸಿಂಹ ಪ್ರಸನ್ನ.

# ಸುಮುಖೀವಿಜಯಂ.

(ಹರಿಭಜನ ಗ್ರಂಥ.)

"ಸ್ವಪ್ನೇರಮಾವಾಸ ಮುನೀಂದ್ರರೂಪೀ ಸ್ವಯಂಸಮಾಗತ್ಯ ಮಮಾಪಿದೇವಃ || ತ್ರಿದಂಡಕಾಷಾಯ ಮದಾನ್ಮದಾಯಸ್ತ್ವಂ ಶ್ರೀನೃಸಿಂಹಂ ಶರಣಂ ಪ್ರಪದ್ಯೆ ||"

(ನೃ-ಪ್ರ)

(ಹಯಗ್ರೀವ ಪ್ರಾರ್ಥನೆ.)

ರಾಗಾ

ನಮಿಸುವೆನಾಂ ಶ್ರೀಹಯವದನಾ ನಿನ್ನ ನಮಿಸುವೆನಾಂ ||ಪ||
ಕಾಮಜನಕಸದಾಶಿವಸನ್ನುತ | ಕಾಮಿತಶುಭಫಲದಾ ವರದಾ || ಅ ಪ ||

ಸಾರಸಸಖನಿಭವದನ| ಸರಸಿಜದಳನಯನ| ಶ್ರೀನಾರೀಮಣಿಸದನ || ಮಾರಹರಸುತಚರಣ | ಮುರಮದಹರಣ | ಘೋರತರಭವರೋಗನಿವಾರಣ || ಭೂರಿಕರುಣಾರಸ ಪರಿಪೂರಿತಲೋಚನ | ಶರಣಾಗತಜನಾಘಮೋಚನ ! ವಾರಿಜಾಸನಕರಸುಪೂಜಿತ | ವಾಸವಾದ್ಯಖಿಲ ಸುರಪರಿಪಾಲನ || ನಮಿಸುವೆನಾಂ ||೧||

ಕೌಸ್ತುಭಮಣಿಹಾರ | ಪುಸ್ತಕಧರಶ್ರೀಕರ | ಶ್ರೀವತ್ಸಾಂಕಿತ ಸುಮನೋಹರ || ಪಕ್ಷಿಗಮನ ಪುರುಷೋತ್ತಮ | ನತಪೂರ್ಣಕಾಮ !

ಭಕ್ತಿವರ್ಧನ ನಿಲಯಾಪ್ರಮೇಯ | ಭಕ್ತಿಜ್ಞಾನಪ್ರದಾಯಕ | ಮುಕ್ತಿ ಮಾರ್ಗಪ್ರದರ್ಶಕ | ನಕ್ತಂಚರರಾಜತಮೋಮಿಹಿರ ಶ್ರೀಹಯಾಸ್ಯಾ || ನಮಿಸುವೆನಾಂ ||೨||

ಶ್ರೀಶಜನಾರ್ಧನ ಚಿದ್ವಿಲಾಸ | ಕಮನೀಯವೇಷ | ಶ್ರೀಶೇಷಾದ್ರಿನಿವಾಸ || ದಾಸಜನಹೃತ್ಪದ್ಮವಿಕಾಸ | ಕಪಿಮನೋಲ್ಲಾಸ | ಭಾಸ್ಕರಕೋಟಿದ್ಯುತಿಭಾಸ || ಕೇಶವನಾರಾಯಣ ಜಯಜಯವೆಸ್ನುತ | ಮಿಾಸಲಾಗಿ ಪಾಡುವೆ ಪೊರೆತಾತಾ || ನಮಿಸುವೆನಾಂ || ೩ ||

## (ಲಕ್ಷ್ಮಿಸ್ತುತಿ.)

ರಾಗ (ಧರ್ಮಸಂವರ್ಧಿನೀ)

ಭಕ್ತಮಂದಾರಿಣೀ | ಭವಭಯನಿವಾರಿಣಿ || ಭುಕ್ತಿಮುಕ್ತಿಪ್ರದಾಯನೀ | ತ್ರಿಭುವನೈಕಜನನೀ ||ಪ|| ಭುವನತ್ರಯಮೋಹಿನಿ| ಭಾನುಕೋಟಿ ಪ್ರಕಾಶಿನಿ | ಭೂರಿಭೂಭುಜಕುಲಸೌಭಾಗ್ಯದಾಯಿನಿ | ಪಾಹಿಮಾಂಜನನೀ || ಅನು || ವನಜಸಂಭವಸನ್ನುತೆ | ಕನಕಭೂಷಣಭೂಷಿತೆ | ಅನಿಲನಂದನಸೇವಿತೇ | ಘನಕರುಣಾರಸಾನ್ವಿತೆ || ಸನಕಸನಂದನಾದ್ಯಖಿಲಮುನಿಬೃಂದವಂದಿತೇ | ಅನುಪಮಸೌಂದರ್ಯವಿರಾಜಿತೆ | ಅನಘಸದ್ಗುಣಸಂಶೋಭಿತೇ || ಅನಿಮಿಷಾಧಿಪಪೂಜಿತೆ | ಜನಕಭೂಪತಿಪೋಷಿತೆ || ಘನಮಹಿಮಶೇಷಾದ್ರಿನಾಥ ಶ್ರೀಹರಿದಯಿತೆ ||೧||

## ಆತ್ಮೋಪದೇಶ.

ರಾಗ (ತಾಯೆರಾಜರಾಜೇಶ್ವರಿ)

(ರಾಮ) ನಾಮರಸಾಯನಂ ಪಿಬ, ಹೇ, ಮಾನಸಶ್ರೀಹರಿ || ನಾಮ || ಪ || ರಾಮನಾಮರಸಾಯನಂ | ಸಂಸಾರ

ರೋಗನಿವಾರಣಂ । ಸಂಚಿತಪಾತಕವಿಧ್ವಂಸನಕಾರಣಂ ಹರಿಕೀರ್ತನಂ ॥ ನಾಮ ॥೧॥ ಭಕ್ತಾರ್ತಿವಾರಣಂ । ಭವಭಯಾಬ್ಧಿಶೋಷಣಂ । ಭಕ್ತಿಮುಕ್ತಿಸಾಧನಂ । ಶ್ರೀಹರಿನಾಮಸಂಕೀರ್ತನಂ ॥ ನಾಮ ॥೨॥ ಕ್ಲೇಶಪಾಶವಿಮೋಚನಂ । ಕವಿಮನೋಲ್ಲಾಸಕಾರಣಂ । ಶ್ರೀಶೇಷಾದ್ರೀಶಸ್ಮರಣಂ । ಕಲಿಕಲ್ಮಷಭಂಜನಂ ॥ ನಾಮರಸಾಯನಂ ಪಿಬ ॥೩॥

ವಚನ—ಎಲೈ ಮನವೇ, ಹರಿಭಜನೆಮಾಡು! ಮಾಡು!! ಹರಿಯೇ ಸರ್ವೋತ್ತಮನೆಂದು ಕೊಂಡಾಡು, ಹರಿಸೇವೆಯಿಂದ ಧನ್ಯನಾದೆನೆಂದು ನಲಿದಾಡು, ಹರಿದಾಸರಿಗೆ ದುರಿತ ಭೀತಿಯೇ ಇಲ್ಲವೆಂದು ನೆನೆನೆನೆದು ಹರಿಯಲ್ಲಿ ಭರವಸೆಯನ್ನಿಡು, ಹರಿಗುಣಕಥನಕ್ಕೆ ಈಡಿಲ್ಲವೆಂದು ಪಂಥವನ್ನು ತೊಡು. ಬೇಡು ಬೇಡು,—ಭಕ್ತವತ್ಸಲನನ್ನು ಭಯಭಕ್ತಿಯಿಂದ ಬಿಡದೆ ಕಾಡಿ ಬೇಡು. ಆಗಲೀಗ ಕೈಹಿಡಿದು ಕಾಪಾಡುವ ಕೇಶವನ ಕೃಪೆಯೆಷ್ಟೆಂಬುದನ್ನು ನೋಡು.

## ಸದಸದ್ವಿಚಾರ.

ಒಳ್ಳೆಯದು.—ಕೇಶವನಾಮ ಸಂಕೀರ್ತನಕ್ಕೆ ಸರಿಯಾದುದು ಮತ್ತೊಂದಿಲ್ಲವೆಂದೂ, ಸಮಸ್ತ ಸುಖಸಮಾಧಾನಕ್ಕೂ ಭಗವನ್ನಾಮಗುಣಕಥನವೇ ಮುಖ್ಯಸಾಧನವೆಂದೂ ಹೇಳುವೆಯಷ್ಟೆ; ಆದರೆ ಸದ್ಗತಿ ಸಾಧನಕ್ಕೆ ಹರಿನಾಮ ಸಂಕೀರ್ತನೆಯೊಂದೇ ಸಾಕೋ? ಹಾಗೆ ಅದೊಂದರಿಂದಲೇ ಸಮಸ್ತ ಪುರುಷಾರ್ಥಗಳೂ ಪ್ರಾಪ್ತಿಯಾಗುವದಾದರೆ, ದಾನಧರ್ಮ ಪರೋಪಕಾರಾದಿ ಕರ್ಮಾಚರಣೆಯನ್ನು ರೂಢಿಗೆ ತಂದಿರುವುದೇಕೆ? ಅವುಗಳಿಂದ ಸದ್ಗತಿಪ್ರಾಪ್ತಿಯಾಗುವದೆಂಬ ಸೂಕ್ತಿಗೆ ಸಾರ್ಥಕ್ಯತೆಯೆಲ್ಲಿ? ಇದಕ್ಕೆ ಸರಿಯಾದ ಸಮಾಧಾನವೇನು?

ನಿಜ ! ದಾನ ಧರ್ಮ ಪರೋಪಕಾರಾದಿ ಸತ್ಕರ್ಮಾಚರಣೆಯಿಂದ ಸ್ವರ್ಗಾದಿ ಸುಖಪ್ರಾಪ್ತಿಯಾಗುವುದೆಂಬುದು ನಿಜ. ಆದರೆ ಸ್ವರ್ಗಾದಿ ಸುಖ ಪ್ರಾಪ್ತಿಯಾದ ಮಾತ್ರಕ್ಕೆ ಶಾಶ್ವತವಾದ ಆನಂದವು ಲಭಿಸಿದಂತಾಗುವುದಿಲ್ಲ. ಶಾಶ್ವತಸುಖದಾಯಕವಾದ ಪರಗತಿಗೆ ಕರ್ಮಾಚರಣೆಯೇ ಸಾಧನವಾಗಲಾರದು. ಎಂದರೆ ಅದು ಕೇವಲ ನಿಷ್ಫಲವೆಂದಾಗಲಿ, ಅದನ್ನು ಮಾಡಬಾರದೆಂದಾಗಲೀ ಹೇಳುವುದಿಲ್ಲ. ಮಾನವನಾದವನು ಸತ್ಕರ್ಮಾಚರಣೆಯನ್ನು ಅತ್ಯಾವಶ್ಯಕವಾಗಿ ಕೈಕೊಳ್ಳಬೇಕೆಂಬುದೇ ಭಗವಂತನ ಕಟ್ಟಳೆಯಾಗಿರುವುದು. ಅದನ್ನು ಮಾಡದಿದ್ದರೆ ನಾವು ಕರ್ತವ್ಯವನ್ನೇ ಬಿಟ್ಟ ಕರ್ಮಭ್ರಷ್ಟರಾಗುವೆವು. ಆದುದರಿಂದ ಭಗವನ್ನಿಯಮಿತವಾದ ಕರ್ಮವನ್ನು ಮಾಡಬೇಕಾದುದು ಆಗತ್ಯವೆಂದೂ, ಹಾಗೂ ಅದನ್ನು ಫಲಾಪೇಕ್ಷೆಯಿಲ್ಲದೆ ಭಗವದರ್ಪಿತಬುದ್ಧಿಯಿಂದ ಮಾಡಬೇಕೆಂದೂ ಹೇಳುವುದು ಅನೃತೋಕ್ತಿಯಾಗದು.

ಮತ್ತೂ ವಿಚಾರಮಾಡುವದಾದರೆ, ಸ್ವರ್ಗಾದಿಲೋಕಗಳೇ ಮಾನವನ ಮುಖ್ಯಪ್ರಾಪ್ತಿಸ್ಥಾನವಾದ ಪರಮಪದವೆಂದು ಭಾವಿಸುವಂತಿಲ್ಲ. ಸ್ವರ್ಗಾದಿಲೋಕಗಳು ಪುಣ್ಯಕರ್ಮದ ಅವಧಿಯಿರುವಷ್ಟು ಕಾಲದವರೆಗೆ ಮಾತ್ರವೇ ಅನುಭವಿಸಲ್ಪಡುವ ಸುಖ-ಭೋಗಸ್ಥಾನಗಳಾಗಿರುವವು. ಆ ಬಳಿಕ ಎಂದರೆ, ಪುಣ್ಯವು ಮುಗಿದ ಬಳಿಕ ಮತ್ತೆಯೂ ಈ ಕರ್ಮಭೂಮಿಯಲ್ಲಿ ದೇಹಧಾರಣಮಾಡಿಯೇ ಮಾಡುವೆವು.

ಆದಕ್ಕಾದರೂ—ಎಂದರೆ ಸ್ವರ್ಗಾದಿ ಸುಖಪ್ರಾಪ್ತಿಗೂ ಹಿಂದೆ ಹೇಳಿರುವ ದಾನ, ಧರ್ಮ ಪರೋಪಕಾರಾದಿ ಸತ್ಕರ್ಮಾಚರಣವು ಬಹು ನಿಯಮದಿಂದ ಮಾಡಲ್ಪಡಬೇಕಲ್ಲದೆ, ಅಲ್ಪಸ್ವಲ್ಪಮಾತ್ರ ನಿಯಮವನ್ನು ಮೀರಿದರೂ, ಮಾಡಿದ ಕರ್ಮವು ನಿಷ್ಫಲವಾಗಿ ವೃಥಾಶ್ರಮವನ್ನೇ

ಉಂಟುಮಾಡುವದಲ್ಲದೆ, ಕೆಲವು ಸಂದರ್ಭಗಳಲ್ಲಿ ಅಧೋಗತಿಗೆ ಕಾರಣವಾಗಿಯೂ ಪರಿಣಮಿಸಬಹುದು. ಇದಕ್ಕೆ ದೃಷ್ಟಾಂತವಾಗಿ—ದಿನಂಪ್ರತಿ ಸಹಸ್ರಗೋದಾನವನ್ನು ಮಾಡುತ್ತಿದ್ದರೂ ನೃಗಮಹಾರಾಜನು ತನ್ನ ಅಲ್ಪಮಾತ್ರದೋಷದಿಂದ ಎಂದರೆ ವಿಚಾರಲೋಪದಿಂದ ವಿಪ್ರಶಾಪಕ್ಕೆ ಗುರಿಯಾಗಿ, ಕೃಕಲಾಸ ಜನ್ಮವನ್ನೈತ್ತಿ ಬಹು ದೀರ್ಘಕಾಲದವರೆಗೂ ಕ್ಲೇಶವನ್ನನುಭವಿಸಿದನು. ಇಂದ್ರದ್ಯುಮ್ನಮಹಾರಾಜನು ಅನೇಕ ಯಾಗವನ್ನುಮಾಡಿ, ಭಗವದ್ಭಾಗವತರನ್ನು ಎಷ್ಟೋ ಭಕ್ತಿಭಾವದಿಂದ ಸೇವಿಸುತ್ತಿದ್ದರೂ, ವಿಸ್ಮೃತಿಯಿಂದ-ಸ್ವಲ್ಪಮಾತ್ರದ ವಿಳಂಬದಿಂದ ಅಪಚಾರಕ್ಕೆ ಗುರಿಯಾಗಿ ಗಜಜನ್ಮವನ್ನೈತ್ತಿ, ಸಹಸ್ರವರ್ಷಪರ್ಯಂತರವೂ ನಕ್ರನಬಾಯಲ್ಲಿ ಸಿಕ್ಕಿ ನರಳುವಂತಾದನು. ಇನ್ನೂ ಹೀಗೆ ಎಷ್ಟೋ ಮಂದಿಗಳು ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳಲ್ಲಿ ತಿಳಿದು ತಿಳಿಯದೆ ಬಂದೊದಗುವ ನ್ಯೂನಾತಿರಿಕ್ತ ದೋಷಗಳಿಂದ ಬಗೆಬಗೆಯಾದ ಕ್ಲೇಶಗಳನ್ನು ಅನುಭವಿಸಿದರೆಂದು ನಮ್ಮ ಆರ್ಯರ ಪುರಾಣೇತಿಹಾಸಗಳು ಬಹುವಾಗಿ ಹೇಳುತ್ತಿರುವುವು. ಅದಿರಲಿ, ಒಟ್ಟಿನಲ್ಲಿ ಹೇಳುವುದೇನಂದರೆ ಶಾಶ್ವತಸುಖಾನಂದದಾಯಕವಾದ ಮುಕ್ತಿಯನ್ನು ಹೊಂದಬೇಕಾದರೆ, ಭಗವಂತನ ಸುಪ್ರಸನ್ನತೆಯೇ ಆಧಾರವಾಗಿರುವುದು. ಅದಿಲ್ಲದಿದ್ದರೆ ಉಳಿದ ದಾನ ಧರ್ಮ ಪರೋಪಕಾರಗಳಾವುವೂ ಫಲಕಾರಿಯಾಗಲಾರವು.

ಆಗಲಿ, ಭಗವಂತನ ಒಲಿಮೆಗೆ ಉಪಾಯವಾಗುವುದು ? ಪೂರ್ವದಲ್ಲಿ ಪಲವು ಮಂದಿ ರಾಜರ್ಷಿಗಳೂ, ತಪಸ್ವಿಗಳೂ ಅನೇಕಕಾಲ ಮಹತ್ತರವಾದ ತಪಃಕ್ಲೇಶಗಳನ್ನು ಸಹಿಸಿಯೂ, ದುಸ್ಸಾಧ್ಯವಾದ ವ್ರತಗಳನ್ನು ನಡೆಯಿಸಿಯೂ, ಇನ್ನೂ ಯಜ್ಞಯಾಗಾದಿ ಎಷ್ಟೋ ಪ್ರಯಾಸಕರಗಳಾದ ಕರ್ಮಗಳನ್ನಾಚರಿಸಿಯೂ, ಪರಮಾತ್ಮನ ಪ್ರಸನ್ನತೆಗೆ

ಪಾತ್ರರಾಗಲಿಲ್ಲವೆಂದು ತೊಳಲಿದರೆಂಬದಾಗಿ ತಿಳಿದುಂಟು. ಇನ್ನು ಅಲ್ಪರಾದ ನಮ್ಮ ಪಾಡೇನು? ಎಂದರೆ ಯಜ್ಞ, ಯಾಗ, ಜಪ, ತಪಾದಿಗಳಿಂದಲೇ ಭಗವದನುಗ್ರಹವುಂಟಾಗುವುದೆಂಬುದು ಸುಳ್ಳು. ಹರಿಯೊಲುಮೆಗೆ ಅವು ಮುಖ್ಯವಲ್ಲ. ಹರಿಯೊಲ್ಮೆಗೆ ಅತ್ಯಂತ ಸುಲಭವಾದ ಉಪಾಯವೊಂದೇ ಇರುವುದು ಆದಾವುದೆಂದರೆ:

ರಾಗ|| ಕಲ್ಯಾಣಿ|| (ಶ್ರೀರಾಮನ ದೂತನು, ಕೇಳೈ)

ಶ್ರೀಕಾಂತನ ನೊಲಿಸುವಾ| ಬಗೆಯಾನೊರವೆ| ನೀಕೇಳೆಲೆ ಮಾನವಾ ||ಪ|| ಶ್ರೀಕರಗುಣಯುತ | ಪಾಕಶಾಸನವಿನುತ | ಲೋಕೈಕವೀರನನೊಲಿಸುವ| ತೆರನಪೇಳ್ವೆನಾಲಿಸು || ಶ್ರೀಕಾಂತ ||ಅನು|| ಶಕ್ತಿಸಾಹಸಗಳಿಗೆ| ಸೋಲುವನಲ್ಲ| ರಕ್ಕಸಾಂತಕಮಲ್ಲ | ಯುಕ್ತಿಮಾರ್ಗಕೆಮನವ| ಸಿಲುಕಿಪನಲ್ಲ | ಭಕ್ತವತ್ಸಲ ಶಿರಿನಲ್ಲ || ವಿತ್ತಮೂಲಕದಿಂದ ಚಿತ್ತಚಲಿಸುವದಲ್ಲ | ಮತ್ತೆ ಮಣಿಹೇಮಗಳರ್ಥಿಗೊಳ್ಳಿಪುವಲ್ಲ | ಮುಕ್ತಿದಾಯಕನಮೆಚ್ಚಿಸಲ್ ವಿರಕ್ತಿಯಿಂಫಲವಿಲ್ಲ| ಲಕ್ಷಣವು ತಾನವನವಶಗೊಂಬುದಲ್ಲ || ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಮೆಚ್ಚಿಸಲ್ ಭಕ್ತಿಯೆಂಬುದೊಂದೇ ಉತ್ತಮೋಪಾಯ ಕೇಳೆಲೈ || ಶ್ರೀಕಾಂತ ||೧|| ಬಡವಿಪ್ರನೇನಿತ್ತನೈ| ಸರ್ವೇಶಗೆ | ಅಡವಿಯನಾರೈಯುತೆ| ದೃಢಭಕ್ತನಾಧ್ರುವನು | ಶೈಶವದೊಳೆ| ಪಡಿಯಿಲ್ಲದಪದವಡೆಯಲ್ || ಪೊಡೆವೀಶನಡಿಗಿತ್ತ ತೊಡವಾವುದದನೊರೆ| ದೃಢಭಕ್ತಿಯಲ್ಲದಿ ನ್ನೊಲಿವಾಂತುದಾವುದು || ಕಡುಭಕ್ತನಾವಿದುರ ಪಡೆದನಸುರಾರಿಯಾಲಿಂಗನದಸುಖವಂ | ಮಡದಿಮಣಿಪಾಂಚಾಲಿ ಪಡದಳಕ್ಷಯಪ್ರದಾನವನು || ತಡೆಯೇನುಪೇಳಾ ಪರ

ಮಾತ್ಮನೊಲ್ಮೆಗಿನ್ನಾ। ದೃಢಭಕ್ತಿಯಿಂಮಿಗಿಲಿದಾ ತೊಡವಾವು ದಿರ್ಪುದೈ ॥ ೨ ॥ ದಾನವವಂಶದಲ್ಲಿ । ಜನ್ಮಿಸಿಯುಂ। ಸುಜ್ಞಾನಿ ಪ್ರಹ್ಲಾದನು ! ಸಾನುರಾಗದಿ ಹರಿಯಂ। ಭಕ್ತಿಯಿಂದೆ। ಧ್ಯಾನಿಸೆ ಸ್ತಂಭದೊಳೇ ॥ ಜನಿಸಿಯಾಕ್ಷಣದಲ್ಲಿ ಮನುಜಕೇಸರಿಯಾಗಿ । ಘನಕೋಪವನೆತಾಳಿ ದನುಜನಉರವಸೀಳಿ । ಮನ್ನಿಸುತಭಕ್ತ ನಂ ನನ್ನಿಯಿಂ ಪೈದಡವಿ। ಉನ್ನತೋನ್ನತಪದವನಿತ್ತನಾ ಖಲ ಕುಠಾರಿಶೌರೀ ॥ ಚನ್ನಶೇಷಾದ್ರಿನಿಕೇತನನಪದವಪೊಂದಲು । ಮುನ್ನಭಕ್ತಿಯಿದುವೇ ಮುಖ್ಯಸಾಧನಕೇಳೈ ॥ ಶ್ರೀಕಾಂತನ॥೩॥

ಭಕ್ತಿಯನ್ನು ಸಂಪಾದಿಸುವವಿಧಾನ.

ಆಯಿತು, ಭಕ್ತಿಯೇ ಭಗವತ್ಕೃಪೆಗೆ ಸಾಧನವೆಂದು ತಿಳಿಯ ಲಾಯಿತು ; ಆದರೆ ' ಅದು ಹೇಗಿರುವುದು ? ಹೇಗೆ ದೊರೆವುದು ' ? ಎಂಬುದನ್ನೂ ವಿಚಾರಮಾಡಬೇಕಲ್ಲವೆ ? ನಿಜ! ವಿಚಾರಮಾಡಲೇ ಬೇಕು. ಆಗಲಿ ' ಭಕ್ತಿ' ಎಂಬುದೇ ಈಶ್ವರಾನುಗ್ರಹರೂಪದ-ಎಂದರೆ, ದೈವಿಕಪ್ರೇಮದ ಮೂಲರೂಪವು. ಇದೇ ಮಾನವನ ಪ್ರಕೃತಿ ವ್ಯಕ್ತಿ ತ್ವಗಳನ್ನು ಅನುಸರಿಸಿ, ತಕ್ಕಂತೆ ಪ್ರೇಮ, ಸ್ನೇಹ, ಸ್ನಿಗ್ಧತೆ, ವಿಶ್ವಾಸ, ಗೌರವ, ಪ್ರೀತಿ, ಮೈತ್ರಿ, ಕಾರುಣ್ಯ, ಮೊದಲಾದ ಪರ್ಯಾಯರೂಪಗ ಳಿಂದ ವರ್ತಿಸುತ್ತ, ತನ್ನ ಕಾಂತಿಲಹರಿಯಲ್ಲಿ ಜಗತ್ತನ್ನೇ ನರ್ತಿಸುತ್ತಿರು ವಂತೆ ಮಾಡುವುದು. ಈ ಭಕ್ತಿಯು ನಮ್ಮಲ್ಲಿ ದೃಢಮೂಲವಾಗಿ ನಿಂತಲ್ಲದೆ ಭಗವದನುಗ್ರಹವು ನಮಗೆ ಲಭಿಸಲಾರದು. ಎಂದರೆ ಭಕ್ತಿಯು ಬರಿಯ ಬಾಯಿಮಾತಿಂದಲೇ ದೊರೆಯುವಂತಹದಲ್ಲ. ಆಲಸ್ಯ, ಉದಾ ಸೀನ, ಅಹಂಕಾರ ಅಸೂಯೆ, ಮೊದಲಾದ ದುರ್ಗುಣಗಳನ್ನುಳಿದು, ಶ್ರದ್ಧೆ, ವಿನಯ, ಕ್ಷಮಾ, ಸತ್ಯ, ಶುಚಿತ್ವಗಳನ್ನು ಕ್ರಮವಾಗಿ ಅಭ್ಯಸಿ

ಸುತ್ತೆ ಬಂದು, ತತ್ಸಾಹಾಯ್ಯದಿಂದ, ಮನೋನಿಗ್ರಹಮಾಡಿದವರಿಗೆ, ಎಂದರೆ ದುಷ್ಟಕಾಮ ವಾಸನೆಯನ್ನು ಹೋಗಲಾಡಿಸಿ, ಸ್ಥಿರಬುದ್ಧಿಯನ್ನು ಹೊಂದಿದವರಿಗೆ, ಭಗವದನುಗ್ರಹಕ್ಕೆ ಉಪಾಯವಾಗಿರುವ ನಿಶ್ಚಲ ಭಕ್ತಿಯು ದೊರೆಯುವುದು. ಹಾಗೆ ನಿಶ್ಚಲತ್ವ ಉಂಟಾಗ ಬೇಕಾದರೆ:—

ರಾಗ|| ಕೇದಾರಗೌಳ|| (ಕಡಲದಾಟಿದಧೀರ)

ನಂಬಲಾಗದು ಮಾನವ । ಭ್ರಾಂತಿಸುಖವ । ನಂಬಲಾಗದು ಮಾನವ ||ಪ|| ನಂಬಲಾಗದಮಣ್ಣು ಬೊಂಬೆಯಂದದ ದೇಹ । ದಂಭಲೋಭಗಳಿಂದ ಮದಿಸುತ । ಹಂಬಲಕ್ಕೀಡಾಗುವಂತಹದಿದ || ನಂಬ ||ಅನು|| ನೀರಮೇಗಣಗುಳ್ಳೆ ತೋರಿ ಹಾರುವಬಗೆ ! ತೋರುತ್ತಲಳಿವ ಶರೀರದೊಳ್ಮರುಳಾಗಿ । ಪರಿಪರಿಭೋಗಗಳ।ನಾರೈಸುತ। ಸ್ಥಿರವೆಂದುಭಾವಿಸುತ। ದಾರುಣವಾದ। ಮಾರನಾಟದೊಳಾಡುತ। ನಲಿಯುತಲಿರೆ । ಸಾರಿಬರೆ ತನಗಪಮೃತ್ಯುಕಾಲವು ! ಮೀರಿದುಬ್ಬೆಗವಾಂತುಮಿಡುಕುತ । ಭೋರಿಡುತ ಬೊಬ್ಬಿಡುತ ತರಳರ । ಸಾರಿಕೂಗುವಕಾಯದಿರವನು || ನಂಬಲಾಗದು ||೧|| ಕಾಮಕ್ರೋಧವಬಿಟ್ಟು ರಾಮನೊಳ್ಮನವಿಟ್ಟು । ತಾಮಸಬುದ್ಧಿಯ ನೀಡಾಡುತೆಮತ್ತೆ || ಶಮದಮಾದಿಗಳನುಕ್ರಮದಿಂ। ದಭ್ಯಸಿಸುತ ಕ್ಷಮೆಯನಾಶ್ರಯಿಸುತ್ತ। ಸುಖದುಃಖದೊಳ್ ಸಮಭಾವದಿ ವರ್ತಿಸುತ। ಅಮಲನೆನಿಸುತ || ಕಮಲಲೋಚನ ಶೇಷಾದ್ರಿನಾಥನ । ವಿಮಲಪಾದದೊಳೈಕ್ಯನಾಗಲು। ಅಮಮ ಭಕ್ತಿಯೆಮುಖ್ಯಕಾರಣ। ವೆಮಗೆ ಭ್ರಾಂತಿಯುಸಲ್ಲದೆಂದಿಗು || ನಂಬಲಾಗದು ||೨||

ಈ ತೆರದ ನಿಶ್ಚಲತೆಯು ನಮಗೆ ಅಭ್ಯಾಸದಿಂದಲೇ ಬರಬೇಕಲ್ಲದೆ, ಕುಳಿತು, ನಿಂತು, ಕೂಗಿ ಹೇಳುವುದರಿಂದ ಬರಲಾರದು. ಮತ್ತು, ಈ ಬಗೆಯ ಭಕ್ತಿಯನ್ನು ದೃಢಪಡಿಸಲು ಮಾರ್ಗವಾವುದೆಂದರೆ,— ಮಕ್ಕಳಿಗೆ ಪ್ರಥಮದಲ್ಲಿ, ಬೀಜಾಕ್ಷರವನ್ನು ತಿದ್ದುವಂತೆ, ಭಗವನ್ನಾಮವೆಂಬ ಮಂತ್ರವನ್ನು ನಾಲಿಗೆಯಲ್ಲಿ ನೆಟ್ಟು, ಅದನ್ನು ಅಡಿಗಡಿಗೂ, ಕೀರ್ತನವೆಂಬ ರಸಧಾರೆಯಿಂದ ನೆನೆಯಿಸಿ, ಬೆಳೆಯಿಸುತ್ತಾ ಬಂದರೆ, ಆ ದಿವ್ಯನಾಮ ಸಂಕೀರ್ತನದಿಂದ ಆ ಪರಮಾತ್ಮನಲ್ಲಿ ಅನನ್ಯ ಭಕ್ತಿಭಾವವೂ, ಅಚಂಚಲವಾದ ಪ್ರೇಮವೂ, ಉಂಟಾಗಿ-ಆತನ ಸೇವಾ, ಸಾಕ್ಷಾತ್ಕಾರಗಳನ್ನು ಹೊಂದಬೇಕೆಂಬ ಕಾಮನೆಯು ಮುಂದಾಗಿ, ಮಾನವನ ಸಕಲವಿಧವಾದ ಶ್ರೇಯಸ್ಸಿಗೂ ಸಾಧನವಾಗುವುದು. ಆದುದರಿಂದ ದೀನನಾಗಲಿ, ಶ್ರೀಸಧಾನನೇ ಆಗಲಿ, ಮಾನವಜನ್ಮವನ್ನೆತ್ತಿದ ಸಮಸ್ತರೂ ಭಗವನ್ನಾಮಸಂಕೀರ್ತನವನ್ನು ಮಾಡಲೇಬೇಕೆಂದು ಶ್ರುತಿ ಸಾರುತ್ತಿರುವುದು. ಅಷ್ಟೇ ಅಲ್ಲ. ಭಗವದನುಗ್ರಹಕ್ಕೆ ಮತ್ತೊಂದು ರಹಸ್ಯವಾದ ಸುಲಭೋಪಾಯವಿರುವುದು. ನಾಮಕೀರ್ತನೆ ಯೊಂದರಿಂದ ಭಗವಂತನು ಕೇವಲ ನಾಮರೂಪದಲ್ಲಿ ಮಾತ್ರವೇ ಪರಿಚಿತನಾಗುವನಲ್ಲದೆ, ಯೋಗಗಮ್ಯನಾದ ಆತನ ಅಮೋಘವೂ, ಅತ್ಯದ್ಭುತವೂ, ಆದ್ಯಂತರಹಿತವೂ ಆದ ವಿಶ್ವರೂಪವು, ಅಲ್ಪಜ್ಞರಿಂದ ಕಾಣಲ್ಪಡಲಾರದು. ಆದರೂ, ಆ ಪರಮಾತ್ಮನ ಕೃಪಾಸಾಕ್ಷಾತ್ಕಾರವಾಗಬೇಕೆನ್ನುವವನು, ಮೊದಲು ಸಾಕಾರಬ್ರಹ್ಮಸ್ವರೂಪರಾದ ತಾಯ್ತಂದೆಗಳನ್ನು ಸಾಕ್ಷಾತ್ಪರದೈವಸ್ವರೂಪರೆಂದೇ ಭಾವಿಸಿ, ಸೇವಿಸಬೇಕು. ಇದೇ ಮಾನವನ ಪ್ರಥಮಕರ್ತವ್ಯವು. ಮುಕ್ತಿಸಾಧನಕ್ಕೆ ಇದೇ ಪ್ರಥಮಸೋಪಾನವು.

ಮಾತಾಪಿತೃಸೇವಕನೇ ನಿಜವಾದಭಗವದ್ಭಕ್ತನು.

ಹೀಗೆ ದೈವವೂ, ಗುರುವೂ, ಹಿತೈಷಿಯೂ, ಮಾರ್ಗದರ್ಶಕನೂ, ಸಮಸ್ತವೂ ಆಗಿರುವ ತಾಯ್ತಂದೆಗಳನ್ನು ಉಪೇಕ್ಷಿಸಿ, ದುರಭಿಮಾನದಿಂದ ವಿಚಾರಶೂನ್ಯನಾಗಿ,—ವಿಷಯರೋಗಕ್ಕೆ ಪಕ್ಕಾಗಿ ನರಳುವ ಕೃತಘ್ನನಿಗೆ ಜನ್ಮಜನ್ಮಾಂತರಕ್ಕಾದರೂ ಭಗವದನುಗ್ರಹವಾಗುವುದೆಂಬುದು ಸುಳ್ಳು; ಇಂತಹ ಮದಾಂಧನ ಜೀವಿತವೇ ವ್ಯರ್ಥವು. ಗುರುದ್ರೋಹಿಯಾದವನಿಗೆ ಸುಖವೆಂಬುದು ಸ್ವಪ್ನದಲ್ಲಿಯೂ ದುರ್ಲಭವೇಸರಿ. ಆದುದರಿಂದ ಎಲೈ ಮನಸ್ಸೇ! ಮನಸ್ಸೇ! ಹರಿನಾಮಸಂಕೀರ್ತನೆ ಮಾಡು; ಗುರುಸೇವೆಯನ್ನು ಅಲಸದೆ ಮಾಡು,—ನೀನದರಿಂಲೇ ಪರಮಾತ್ಮನ ಕೃಪಾಕಟಾಕ್ಷಕ್ಕೆ ಪಾತ್ರನಾಗುವೆ, ನೋಡು!

(ಸ್ತ್ರೀಧರ್ಮ)

ಆಯಿತು, ಈವರೆಗೆ ಪುರುಷ ಸಾಮಾನ್ಯಕ್ಕೆ ಆವಶ್ಯಕವಾದ ಧರ್ಮವನ್ನು ವಿಚಾರಮಾಡಿದಂತಾಯಿತು. ಇನ್ನು ಸ್ತ್ರೀಸಾಮಾನ್ಯ ಧರ್ಮವಾವುದೆಂಬುದನ್ನು ವಿಚಾರಮಾಡಬೇಕಾದುದು ಮುಖ್ಯವಲ್ಲವೇ? ನಿಜ; ಆಗಲಿ,—

"ಪತಿಯೇ ಪರದೈವವು. ಪಾತಿವ್ರತ್ಯವೇ ಅನರ್ಘಾಭರಣವು. ಪತಿಯೇ ಸತಿಯರ ಸರ್ವಸ್ವವು. ಇದೇ ಸತೀಕುಲಕ್ಕೆ ಅವಶ್ಯಧರ್ಮವು. ಪತಿವ್ರತೆಯರ ಮಾತನ್ನು ಪರಮಾತ್ಮನೂ ಮೀರಲಾರನು."

ಇನ್ನೂ ಕೇಳಿರಿ—ನನ್ನ ಭಗಿನಿಯರೇ!

ಪತಿವ್ರತೆಯಾದ ಸುವ್ರತೆಗೆ, ಸೌಶೀಲ್ಯವೇ ಮುಖ್ಯವಾದ ಅವಕುಂಠನವು. ಈ ಅವಕುಂಠನವು, ಪ್ರೇಮ, ಸತ್ಯ, ಕ್ಷಮಾ, ಶಾಂತಿ, ಶುಚಿತ್ವಗಳೆಂಬ ಪಂಚರಾಗಗಳನ್ನೊಳಕೊಂಡಿರುವುದು. ಇವುಗಳಲ್ಲಿ ಒಂದರ ಬಣ್ಣವು ಮಾಸಿತೆಂದರೂ ಸಾಕು. ಉಳಿದ ಬಣ್ಣಗಳೂ ಮಾಸಿ

ಹೋಗುವದು ನಿಜ. ಅವಕುಂಠನಕ್ಕೆ ಅಲಂಕಾರಪ್ರಾಯವಾದ ಬಣ್ಣ ಗಳು ಅಳಿಸಿಹೋದರೆ, ಅವಕುಂಠನದ ಪಾಡೇನಾಗಬಹುದು? ಜೀರ್ಣವಸ್ತ್ರದಂತೆ ಕ್ಷಣಾರ್ಧದಲ್ಲಿ ನಶಿಸುವದಲ್ಲವೇ?

ಇರಲಿ, ಇನ್ನು ಪತಿವ್ರತೆಯರ ಆಚಾರ ವಿಚಾರಗಳನ್ನು ವಿಚಾರಿಸುವ. ಪತಿಹಿತವನ್ನು ಕೋರುವ ಸತಿಯು, ವೃಥಾ ಕ್ಲೇಶಕರಗಳಾದ ವ್ರತ, ನಿಯಮ, ಉಪವಾಸ, ಜಾಗರಾದಿ ಪ್ರಯಾಸಕಾರ್ಯಗಳಲ್ಲಿ ಬಿದ್ದು, ತಾನು ತೊಳಲುವುದೂ. ಅಲ್ಲದೆ, ತನ್ನ ಸಾಕಾರನಾದ ಪತಿಯಮನಸ್ಸನ್ನು ಖತಿಗೊಳಿಸುವುದೂ, ಮತ್ತು ತನ್ನನ್ನೇ ಅನುವರ್ತಿಸುತ್ತಿರುವ ಪುತ್ರ-ಪರಿವಾರಗಳಿಗೆ ಭೀತಿಯನ್ನುಂಟುಮಾಡುವುದೂ ಉಚಿತವಲ್ಲ. ಸತಿಯು, ತನ್ನ ಪತಿಗೆ ಅಹಿತವನ್ನುಂಟುಮಾಡುವ ವ್ಯಾಪಾರದಲ್ಲಿ ಮನಸ್ಸನ್ನು ಹೇಗೂ ಸಡಲಿಸದೆ ಬಿಗಿದುಕಟ್ಟಿ, ಮನೋವಾಕ್ಕಾಯುಗಳೆಂಬ ತ್ರಿಕರಣಗಳಲ್ಲಿಯೂ ಏಕರೂಪದಲ್ಲಿದ್ದು, ಪತಿಗೆ ಹಿತವನ್ನು ಆಚರಿಸುವುದೇ ತನ್ನ ಕರ್ತವ್ಯವೆಂಬುದನ್ನು ದೃಢವಾಗಿ ನಂಬಬೇಕು.

"ಹಾಗೋ? ಸರಿ, ಯಾವುದೇ ಒಂದುವ್ರತ, ನಿಯಮಗಳನ್ನೂ ಹಿಡಿಯದೆ, ಎಲ್ಲಕ್ಕೂ ಪತಿಸೇವೆಯೊಂದನ್ನೇ ನಂಬಿ ನಡೆವುದರಿಂದ ಫಲವೇನುಇಂತಹ ಪತಿಸೇವೆಯೊಂದರಲ್ಲಿಯೇ ನಿರತರಾಗಿದ್ದು, ಆರಾರು, ಆವಾವಸುಖ ಸಾಮ್ರಾಜ್ಯವನ್ನು ಹೊಂದಿದರು? ಎಂಬಿವನ್ನು ಮೊದಲು ವಿಚಾರಕ್ಕೆ ತಂದಬಳಿಕಲ್ಲವೇ – ಉಳಿದಮಾತು? " ಹಾಗಿದ್ದರೆ – ಕೇಳಿರಿ, ನನ್ನ ಸೋದರಿಯರೇ! ಮಹಾಭಾರತ ವೃತ್ತಾಂತವನ್ನು ಕೇಳದವರು, ನಮ್ಮ ಆರ್ಯರಲ್ಲಿ ಕೇವಲ ವಿರಳರಲ್ಲವೇ? ಹಾಗೆ ಸರ್ವಶ್ರುತವಾದ ಇತಿಹಾಸವನ್ನು ಇಲ್ಲಿ ನಾವು ಮೊದಲಿಂದ ವಿವರಿಸಬೇಕಾದ ಆವಶ್ಯಕತೆಯಿಲ್ಲವಾದರೂ ಪ್ರಕೃತಕ್ಕೆ ಬೇಕಾದ ವಿಷಯಗಳನ್ನು ಸೂಚಿಸುವುದು ಆಗತ್ಯ

ವಲ್ಲವೇ! ಹಾಗಿದ್ದರೆ ಇತ್ತಗಮನವಿರಲಿ! ದಾಯಾದಮಾತ್ಸರ್ಯದಿಂದ, ರಾಜ್ಯವಿಭಾಗಸಂಬಂಧವಾದ ದ್ವೇಷಬುದ್ಧಿಯಿಂದ, ಧೃತರಾಷ್ಟ್ರಪುತ್ರರಾದ ಕೌರವರು, ಪಾಂಡುಪುತ್ರರಾದ ಧರ್ಮಜಾದಿಗಳನ್ನು ಕಪಟದ್ಯೂತದಲ್ಲಿ ಸೋಲಿಸಿ, ಸಮಸ್ತ ಕೋಶಭಂಡಾರವನ್ನೂ ಅಪಹರಿಸಿ, ಜೂಜಿನಲ್ಲಿ ಸೋತ ಪಾಂಡವರನ್ನು ಅಡವಿಗಟ್ಟಿದರೆಂಬುದನ್ನು ಬಲ್ಲಿರಷ್ಟೆ. ಹೀಗೆ ಸಮಸ್ತ ರಾಜ್ಯ, ಕೋಶ, ಭಂಡಾರಗಳನ್ನು ಸೋತು, ಜ್ಞಾತಿಗಳದೆಸೆಯಿಂದ ಅಪಹಾಸ್ಯಕ್ಕೀಡಾದರೂ ಕರ್ತವ್ಯಧರ್ಮಗಳನ್ನು ಬಿಡದೆ, ಸಹಜಕ್ಷಮೆಯಿಂದ ಪಾಂಡವಜ್ಯೇಷ್ಠನಾದ ಧರ್ಮರಾಯನು ಸಹೋದರರಾದ ಭೀಮಾರ್ಜುನ ನಕುಲಸಹದೇವರನ್ನೂ, ಪುರೋಹಿತನಾದ ಧೌಮ್ಯನನ್ನೂ, ಪಟ್ಟಮಹಿಷಿಯಾದ ಪಾಂಚಾಲಿಯನ್ನೂ, ಇತರ ಪತ್ನೀಪುತ್ರವರ್ಗಕ್ಕೆ ಸೇರಿದವರೆಲ್ಲರನ್ನೂ ಜತೆಗೊಂಡು, ಕಾಮ್ಯಕವನವನ್ನು ಸೇರಿ, ಅಲ್ಲಿ ಕಾಮಿತಾರ್ಥಪ್ರದನಾದ ಸೂರ್ಯನಾರಾಯಣನನ್ನುಪ್ರಾರ್ಥಿಸಿ, ಅಕ್ಷಯಪಾತ್ರವನ್ನು ಪಡೆದು, ಅದರಸಹಾಯದಿಂದ ವನರಾಜ್ಯದಲ್ಲಿಯೇ ಅನೇಕಜನ ಬ್ರಾಹ್ಮಣರನ್ನು ಸುಖಭೋಜನದಿಂದ ಸಂತುಷ್ಟರನ್ನಾಗಿ ಮಾಡುತ್ತಿದ್ದನು.

ಅತ್ತ—ದ್ವಾರಕಾಪುರದಲ್ಲಿ ವಸುದೇವಪುತ್ರನಾಗಿ ಅವತರಿಸಿದ್ದ ಶ್ರೀ ಕೃಷ್ಣಪರಮಾತ್ಮನು, ತನ್ನ ಸೋದರತ್ತೆಯ ಮಕ್ಕಳಾದ ಕೌಂತೇಯ [ಕುಂತೀಪುತ್ರರಾದ ಪಾಂಡವ]ರಿಗೆ ಉಂಟಾದ ದುರ್ದೆಸೆಯನ್ನು ಕೇಳಿ, ವ್ಯಥೆಪಟ್ಟು, ಪಾಂಡವರನ್ನು ಸಂತೈಸಿ ಬರಬೇಕೆಂದು ಸಂಕಲ್ಪಿಸಿ, ಸತ್ಯಭಾಮಾಸಹಿತನಾಗಿ ಬಂದು, ಪಾಂಡವರಿಗೆ ತನ್ನ ಅನ್ಯಾಜಮನೋಹರಪ್ರೇಮವನ್ನು ಪ್ರದರ್ಶಿಸಿ, ಪ್ರಸನ್ನನಾದನು.

ಹೀಗೆ ರಾಜ್ಯಚ್ಯುತರಾಗಿ ವನವಾಸ ಕ್ಲೇಶಕ್ಕೀಡಾದವೆಂದು ಮರು

ಗುತ್ತಿದ್ದ ಪಾಂಡವರಿಗೆ ಕೃಪೆಮಾಡಿ. ಅಪ್ರಾರ್ಥಿತನಾಗಿಯೇ ದಿವ್ಯದರ್ಶನಲಾಭವನ್ನಿತ್ತ ಶ್ರೀಕೃಷ್ಣನನ್ನು ನೋಡಿದುದರಿಂದ ಆಹ್ಲಾದವೆಷ್ಟೆಂಬುದನ್ನು ಇಲ್ಲಿ ವಿವರಿಸಬೇಕೇ? ವಯೋಜ್ಯೇಷ್ಠನಾಗಿದ್ದುದರಿಂದ ಧರ್ಮರಾಯನು ತನಗೆಲ್ಲಿ ನಮಸ್ಕರಿಸುವನೋ-ಎಂದು ಕೃಷ್ಣನು ತಾನೇ ಮುಂದಾಗಿ ಬಂದು-ಧರ್ಮರಾಯನಿಗೂ, ಭೀಮಸೇನನಿಗೂ ವಂದಿಸಿ, ಅವರ ಅಭಿನಂದನಗಳನ್ನು ಕೈಕೊಂಡು, ಸಮಾನ ವಯಸ್ಕನಾಗಿದ್ದ ಧನಂಜಯ[ಅರ್ಜುನ]ನನ್ನು ಆಲಿಂಗಿಸಿ, ನಕುಲ ಸಹದೇವರ ನಮಸ್ಕಾರಗಳನ್ನು ಸ್ವೀಕರಿಸಿ, ಅಡಿಗೆರಗಿ ಕಣ್ಣೀರುಸುರಿದ ದ್ರೌಪದಿಯನ್ನು ಹರಸಿ, ಸಂತೈಸಿ, ಅಳಿಯನಾದ ಅಭಿಮನ್ಯುವನ್ನೂ, ತಂಗಿಯಾದ ಸುಭದ್ರೆಯನ್ನೂ ನಲವಡಿಸಿ, ಉಪಪಾಂಡವರನ್ನು ಆದರಿಸಿ, ಇನ್ನೂ ಹಲವು ಬಗೆಯಿಂದ ಭಾವಮೈದುನರಾದ ಧರ್ಮಾದಿಗಳನ್ನು ನಲವಡಿಸುತ್ತ ಸುಖದಿಂದಿರುತ್ತಿದ್ದನು.

ಹೀಗಿರಲು ಸತ್ಯಭಾಮಾದೇವಿಯು, ಒಂದು ದಿನ ತನ್ನ ನಾದಿನಿಯಾದ ದ್ರೌಪದಿಯೊಡನೇಕಾಂತದಲ್ಲಿ ಕುಳಿತು, ಮಾತನಾಡುತ್ತ ಹೀಗೆ ಕೇಳಿದಳಂತೆ!—"ಎಲೆ, ನಾದಿನಿ! ಲೋಕದಲ್ಲಿ ಒಬ್ಬನೇ ಪತಿಯಾಗಿದ್ದೂ, ಪತಿಯ ಮನವೊಲಿವಂತೆ ಮಾಡಿಕೊಳ್ಳಲು ಸತಿಯರಿಗೆ ಅಸಾಧ್ಯವೆನ್ನಿಸುವುದು. ನೀನು ಐದುಮಂದಿ ಪತಿಗಳನ್ನು ಹೊಂದಿಯೂ - ಅವರೈವರೂ ನಿನ್ನಲ್ಲಿ ಅಕೃತ್ರಿಮವೂ, ಅವಿಚ್ಛಿನ್ನವೂ ಆದ ಪ್ರೇಮದಿಂದ ವರ್ತಿಸುವಂತೆ ಮಾಡಿಕೊಂಡಿರುವೆಯಲ್ಲಾ! ಯಾವ ಮಣಿ ಮಂತ್ರೌಷಧ ಮೂಲಿಕಾ ಪ್ರಯೋಗಗಳಿಂದ ಹೀಗೆ ಪತಿಗಳನ್ನು ವಶೀಕರಿಸಿಕೊಂಡಿರುವೆ? ದಯವಿಟ್ಟು ನನಗೂ ತಿಳಿಯಹೇಳು. ಉದಾಸೀನನಾಗಿರುವ ನನ್ನ ಪತಿಯನ್ನು ನಾನೂ ವಶಪಡಿಸಿಕೊಂಡು ಸುಖಪಡುವೆನು."

ಸತ್ಯಭಾಮಾದೇವಿಯ ಈ ಮಾತಿಗೆ ದ್ರೌಪದಿಯು ಗಹಗಹಿಸಿ

ಗುತ್ತ ಹೇಳಿದಳು. "ಅತ್ತಿಗೆ! ಏನುಹೇಳಿದೆ? ಪತಿಯನ್ನು ವಶಪಡಿಸಿಕೊಳ್ಳಬೇಕೆಂದೆಯಾ? ಭಲೆ! ಪರಾತ್ಪರನೂ, ತ್ರಿಲೋಕನಾಥನೂ, ದಯಾಮಯನೂ, ಅಕ್ಷಯಾತ್ಮನೂ ಆದ ಭಗವಾನ್ ಶ್ರೀಕೃಷ್ಣನನ್ನೇಸ್ವಾಮಿಯನ್ನಾಗಿ ಪಡೆದೂ, ನೀನು ಹೀಗೆ ಸಾಮಾನ್ಯಸ್ತ್ರೀಯಂತೆ ಮರುಳಾಟಕ್ಕೆರಗಬಹುದೇ? ಪತಿಯು ಪ್ರಸನ್ನನಾಗುವಂತೆ ಮಾಡುವ ಸತೀಧರ್ಮವನ್ನು ತೊರೆದು, ಇತರ ಮಣಿ, ಮಂತ್ರ, ಔಷಧ, ಮೂಲಿಕಾಪ್ರಯೋಗಗಳಿಂದ ಪತಿಯಪ್ರಾಣವನ್ನೇ ತೆಗೆವ ಪತಿಘಾತಕಿಯರಂತೆ ಸರ್ವನಾಶ ಮಾಡಿಕೊಳ್ಳಲು ಚಿಂತಿಸುನೆಯಾ? ಸತ್ಯಭಾಮಾ! ನಿಜವಾಗಿಹೇಳು? ನಿನ್ನ ಸ್ಥಾನ, ಕರ್ತವ್ಯ ಗೌರವ, ಧರ್ಮಗಳನ್ನು ಕುರಿತು, ಸ್ವಲ್ಪವಾದರೂ ಚಿಂತಿಸು! ಪತಿಗಿಂತಲೂ ಪರವಸ್ತುವೂ ಸತಿಯರಿಗಿಲ್ಲವೆಂದು ನಂಬು!! ಅದಿರಲಿ ಕೇಳು, ನಾನು ನನ್ನ ಪತಿರಾಜರಮನವನ್ನು ವಶಪಡಿಸಿಕೊಳ್ಳಲು ಮಾಡಿದಪ್ರಯೋಗವಿದೇ!—

॥ಆರ್ಯಾ॥

ಅರುಣೋದಯಕಾನೇಳುತೆಭರದಿಂ। ವಿರಚಿಸಿಮಜ್ಜನಕೃತ್ಯಗಳಂ । ಧರಿಸುತ ಶುಭ್ರಾಂಬರವಂ ನಲವಿಂ ಸ್ಮರಿಸುತೆಸರ್ವೇಶ್ವರನಡಿಯಂ ॥ ೧ ॥ ವೀಣಾಗಾಯನ ವಾದ್ಯಗಳಿಂದಂಪ್ರಾಣೇಶ್ವರರನುಎಚ್ಚರಿಸಿ । ಕಾಣಿಸಿ ಶುಭವಸ್ತುಸಮೂಹಗಳಂ ಸ್ನಾನಾಹ್ನಿಕಗಳಿಗನುಗೊಳಿಸಿ ॥೨॥ ಪತಿಗಳಿಗಭಿಮತಮಪ್ಪಸುವಸ್ತುಗಳತಿಶಯದಿಂದಲೆ ಹದಗೊಳಿಸಿ ॥ ಹಿತಭೋಜನದಿಂ ಹಿತವಾಚನದಿಂ ಸತತವುಸೇವಿಪೆಮನವೆರಸಿ॥೩॥ ಪತಿಗಳಿಗಹಿತವ ಕೊರದೆಮತಿಯೊಳ್। ರತಿಪತಿಪಿತನಂದದೊ

ಶಿವರೇ । ಗತಿಯೆನಗೆಂದೆಣಿಸಿಹೆ ಶ್ರೀಮತಿಕೇಳ್ ಸತಿಯರ ಧರ್ಮವಿದಹುದೆಂದೇ ॥೪॥

( ವಚನ )

ಕೇಳಿದೆಯಾ--ಅತ್ತಿಗೆ! ಇದೇ ನನ್ನ ವಶೀಕರಣರಹಸ್ಯವು; ಇಷ್ಟೇ ಅಲ್ಲ. ಇನ್ನೂ ಹೇಳುವೆನು, ಕೇಳು! ಸಾಧ್ವೀಮಣಿಯರ ಅದ್ಭುತಪ್ರಭಾವವನ್ನು ಅಲ್ಪವಾದರೂ ಕೇಳಿ ಶಾಂತಳಾಗು.

'ಸಪ್ತರ್ಷಿಶ್ರೇಷ್ಠರಾದ ಅತ್ರಿಮಹರ್ಷಿಗಳಿಗೆ ಭಾರ್ಯೆಯೂ,ಲೋಕಮಾನ್ಯೆಯೂ ಆದ ಅನಸೂಯಾ ದೇವಿಯು, ತ್ರಿಮೂರ್ತಿಗಳನ್ನೇ ಶಿಶುರೂಪಿಗಳನ್ನಾಗಿಮಾಡಿ, ಅವರವರ ಪತ್ನಿಯರನ್ನೂ ಬರಮಾಡಿಕೊಂಡು, ಸುಪ್ರಸನ್ನರಾದ ತ್ರಿಮೂರ್ತಿಗಳಿಂದ ಅಜರಾಮರವಾದ ಕೀರ್ತಿಯನ್ನು ಹೊಂದಿದಳು. ತಪಸ್ವಿಗಳಲ್ಲೆಲ್ಲಾ ವರಿಷ್ಠರಾದ ವಸಿಷ್ಠರ ಭಾರ್ಯೆಯಾದ ಅರುಂಧತೀದೇವಿಯು, ಕಲ್ಲುಗಳನ್ನು ಕಡಲೆಗಳನ್ನಾಗಿ ಮಾಡಿ, ಶಕ್ತಿ, ಧೃತಿ, ಕಾಂತಿಯರೊಡಗೂಡಿ ಬಂದ ಶಿವ,ಬ್ರಹ್ಮ,ವಿಷ್ಣುಮೂರ್ತಿಗಳನ್ನು ಸೇವಿಸಿ, ತ್ರಿಲೋಕವಿಖ್ಯಾತೆಯಾದಳು. ಅಗಸ್ತ್ಯಭಾರ್ಯೆಯೂ, ಮಗಧೇಶ್ವರನ ಸುಕುಮಾರಿಯೂ ಆದ ಲೋಪಾಮುದ್ರಾದೇವಿಯು, ಸಂಕಲ್ಪಮಾತ್ರದಿಂದಲೇ ಷೋಡಶಸಹಸ್ರಬ್ರಾಹ್ಮಣ ಸಂತರ್ಪಣೆಯನ್ನು ಮಾಡಿ, ಸರ್ವಜನಸ್ತುತ್ಯಳಾದಳು. ಅಶ್ವಪತಿರಾಯನ ಸುತೆಯೂ, ಸತ್ಯವಾನನ ಸತಿಯೂ ಆದ ಸಾವಿತ್ರೀದೇವಿಯು, ಪಿತೃಪತಿಯಾದ ಯಮನನ್ನು ತನ್ನ ಪಾತಿವ್ರತ್ಯಪ್ರಭಾವದಿಂದ ಜಯಿಸಿ, ಮೃತನಾಗಿದ್ದ ಪತಿಯನ್ನು ಮತ್ತೆ ಪಡೆದು, ಪಿತೃಕುಲವನ್ನೂ, ಮತ್ತು ಪತಿಯ ಕುಲವನ್ನೂ ಉದ್ಧರಿಸಿ, ಉಭಯ ಕುಲೋದ್ಧಾರಿಣಿಯೆಂಬ ಪ್ರಖ್ಯಾತಿಯಿಂದ ನಮ್ಮ ಸ್ತ್ರೀಪ್ರಪಂಚಕ್ಕೆಲ್ಲಾ ಆದರ್ಶರಮಣಿಯಾಗಿ--ಆಚಂದ್ರಾರ್ಕವಾದ ಯಶಸ್ಸ

ರೀರದಿಂದ ಪ್ರಕಾಶಿಸುತ್ತಿರುವಂತಾದಳು. ರಾಜಪುತ್ರಿಯಾದ ಚಂದ್ರಪದನಾದೇವಿಯು, ಅಪ್ಸರಸಿಯರಿಂದ ಕದ್ದೊಯ್ಯಲ್ಪಟ್ಟಿದ್ದ ತನ್ನ ಪತಿರಾಜನನ್ನು ತಪಃಪ್ರಭಾವದಿಂದ ಚಕಿತನಾದ ಇಂದ್ರನೇ, ಕರೆತಂದೊಪ್ಪಿಸುವಂತೆ ಮಾಡಿಕೊಂಡಳು. ದ್ವಿಜಭಾರ್ಯೆಯಾದ ಸುಮತೀದೇವಿಯು, ಪತಿಯ ಪ್ರಾಣವನ್ನುಳಿಸಲಿಕ್ಕೂ, ಮತ್ತು ಮುನಿಶಾಪವನ್ನು ತಪ್ಪಿಸಲಿಕ್ಕೂ ಪವಿತ್ರಮೂರ್ತಿಯಾದ ಪದ್ಮಬಾಂಧವನ ಚಲನೆಯನ್ನೇ ತಡೆದು, ತ್ರಿಮೂರ್ತಿಗಳೇ ಪ್ರಸನ್ನರಾಗಿ ಬಂದು ಪತಿಯನ್ನುಳಿಸಿಕೊಡುವಂತೆ ಮಾಡಿಕೊಂಡಳು. ಸುರಭೀ ದೇವಿಯು, ಸಮುದ್ರದಲ್ಲಿ ಮುಳುಗಿ - ನಾಗಕನ್ಯೆಯಿಂದೊಯ್ಯಲ್ಪಟ್ಟ ತನ್ನ ಪತಿಯನ್ನು, ತನ್ನ ಪಾತಿವ್ರತ್ಯಪ್ರಭಾದಿಂದ ಮತ್ತೆ ಪಡೆದವಳಾದಳು. ಪ್ರಭಾವತೀದೇವಿಯು, ತನ್ನನ್ನು ಏಕಕಾಲದಲ್ಲಿ ಮುತ್ತಿದ ಐವತ್ತುಮಂದಿ ಚೋರರನ್ನು ಕ್ಷಣಮಾತ್ರದಲ್ಲಿ ನಿಗ್ರಹಿಸಿ, ಮರುಳನಾಗಿದ್ದ ಪತಿಯನ್ನು ಸುಸ್ಥಿತಿಗೆತಂದು, ಶತ್ರುಕೈವಶವಾಗಿ ಹೋಗಿದ್ದ ರಾಜ್ಯವನ್ನು ಮತ್ತೆ ಪಡೆದು, ಸ್ವಧರ್ಮ, ಕುಲಗೌರವ, ಕೀರ್ತಿಗಳನ್ನು ಪ್ರಸಾರಕ್ಕೆ ತಂದಳು. ಪುಷ್ಪವೇಣೀದೇವಿಯು ವಿವಾಹಕ್ಕೆ ಮೊದಲೇ ಮನಸಾವರಿಸಿದ್ದ ಪತಿಯು, ಅಕಾಲ ಮೃತ್ಯುವಶನಾಗಿರಲು, ತನ್ನ ಉಗ್ರ ತಪಃಪ್ರಭಾವದಿಂದ ಪ್ರಸನ್ನರಾದ ತ್ರಿಮೂರ್ತಿಗಳನ್ನು ಸ್ತುತಿಸಿ, ಪತಿಭಾಗ್ಯವನ್ನು ಪಡೆದವಳಾದಳು. ಹೀಗೆಯೇ ಕುಂಬಾರನ ಮಗಳಾಗಿ, ಹುಚ್ಚಳೆಂದು ಹೆಸರುಹೊಂದಿದ್ದ ಸುಮುಖೀದೇವಿಯೂ, ಗುರೂಪದಿಷ್ಟವಾದ ಮಂತ್ರಪ್ರಭಾವದಿಂದಲೂ, ತನ್ನ ಯೋಗಬಲದಿಂದಲೂ; ಪೂರ್ಣ ವಾಹಿನಿಯನ್ನು ತಡೆದಳು; ಅಗ್ನಿಭಾದೆಯನ್ನು ತಪ್ಪಿಸಿದಳು ಸೂರ್ಯನ ಚಲನ ವಲನವನ್ನು ನಿಲ್ಲಿಸಿದಳು. ಇನ್ನೂ ಇದೇಬಗೆಯಾಗಿಯೂ, ಇದಕ್ಕೂ ಹೆಚ್ಚಾಗಿಯೂ, ತಮ್ಮ ತಪಃಪ್ರಭಾವದಿಂದ ದಿಗಂತವಿಶ್ರಾಂತ

ವಾದ ಕೀರ್ತಿಯನ್ನು ಹೊಂದಿರುವ ನಮ್ಮ ಆರ್ಯಮಹಿಳಾಮಣಿಯರು ಹಲವರಿರುವರು. ಅಂತ ಹರನಾಮಸ್ಮರಣ ಮಾತ್ರದಿಂದಲೇ ನಮಗೆ ದುರಿತರೋಗವು ಪರಿಹರವಾಗಿ, ಮನಶ್ಶಾಂತಿಯುಂಟಾಗುವುದು. ಇನ್ನು ಆ ತಪಸ್ವಿನಿಯರಿಂದ ಅನುಗ್ರಹೀತವಾದ ಸದ್ವೃತ್ತವನ್ನು ಅವಲಂಬಿಸಿದರೆ ಹೇಳುವುದೇನು? ಅತ್ತಿಗೆ! ಇನ್ನಾದರೂ ತಿಳಿದುಕೊಳ್ಳುವೆಯಲ್ಲವೆ?'

ಸತ್ಯಭಾಮೆಯು, ನಾದಿನಿಯ ದೀರ್ಘಭಾಷಣಕ್ಕೆ ಲಜ್ಜಿತೆಯಾಗಿ ಮೆಲ್ಲನೆ" ಕ್ಷಮಿಸು! ನಾದಿನಿ! ಕ್ಷಮಿಸು!! ಲೋಕನಾಥನಾದ ಶ್ರೀಕೃಷ್ಣಸ್ವಾಮಿಯಲ್ಲಿ ಅಪರಾಧನಿಯಾದುದು ಮಾತ್ರವಲ್ಲ, ಪವಿತ್ರಾಂತಃಕರಣೆಯಾದ ನಿನ್ನಂತಹ ತಪಸ್ವಿನಿಯರಲ್ಲಿಯೂ ಸಾಮಾನ್ಯಭಾವವನ್ನು ಕಲ್ಪಿಸಿ, ಪಾಪಕ್ಕೆ ಪಕ್ಕಾದೆನು! ಸ್ನೇಹಭಾವದಿಂದ ಮನ್ನಿಸಿ, ಉಪದೇಶಿಸು;- ಕೃಷ್ಣೆ! ಕೃಪಾಕಟಾಕ್ಷದಿಂದ ಸಾಧ್ವಿಯರ ಸುಚರಿತ್ರೆಗಳನ್ನು ಸವಿಸ್ತರವಾಗಿ ಹೇಳಿ, ನನ್ನ ಮನಸ್ಸನ್ನು ಸಮಾಧಾನಪಡಿಸು. ಕುಂಬಾರನ ಮಗಳಿಗೆ ಅಷ್ಟರ ಪ್ರಭಾವವು ಹೇಗೆ ಬಂದಿತು? ಕುತೂಹಲಗೊಂಡಿರುವೆನು ಹೇಳು''- ಹೀಗೆಂದು ಕೇಳಿಕೊಂಡಳು.

ದ್ರೌಪದಿಯು, ಸತ್ಯಭಾಮೆಯ ಪ್ರಾರ್ಥನೆಯನ್ನು ಕೇಳಿ, ನಸುನಗುತ್ತ ಹೀಗೆ ಹೇಳುವಳು—

" ಅತ್ತಿಗೆ!

ತೇಜಸ್ವಿತೆಯು, ಜಾತಿ-ಕುಲ-ಗೋತ್ರಗಳೆಂಬ ನಿರ್ಬಂಧಕ್ಕೊಳಪಡುವುದಿಲ್ಲ. ಸರ್ವತೋಮುಖವಾಗಿ ಸ್ತುತಿಸಲ್ಪಡುವ ಜ್ಞಾನವು, ಎಲ್ಲಿ ಯಾರಲ್ಲಿರುವುದೋ, ಅಂತಹ ಭಗವತ್ಕೃಪಾ ಪಾತ್ರರಲ್ಲಿಯೇ ಅದು ಎಂದರೆ, ಆ ತೇಜಸ್ಸು ನೆಲಸಿರುತಕ್ಕುದು. ಆ ಪರಿಶುದ್ಧ ತೇಜಸ್ಸು, ಯಾರಿಂದ ಸಂಗ್ರಹಿಸಲ್ಪಟ್ಟಿರುವುದೋ, ಆ ಪುಣ್ಯಾತ್ಮರ ಪ್ರಯತ್ನ

ವಾಗಲೀ, ಸಂಕಲ್ಪವಾಗಲೀ ಎಂದಿಗೂ ವ್ಯರ್ಥವೆನಿಸಲಾರವು. ಆದುದರಿಂದ ವಿಜ್ಞಾನಪ್ರದವಾದ ಸದ್ಭಾವನೆಯೇ ಮಾನವನಿಗೆ ಕಾಂತಿ ಅಥವಾ ಕೀರ್ತಿ ಪ್ರದವಾದ ಆಭರಣವಾಗಿರಬೇಕಲ್ಲದೆ, ಉಳಿದ ಕುಲ, ಜಾತಿಗಳ ಹೆಮ್ಮೆಯಾಗಲೀ, ಧನಸಂಪತ್ತಿಯ ತೊಡರುಗಳಾಗಲೀ, ಕಾಂತಿಯನ್ನುಂಟು ಮಾಡಲಾರವು. ಇನ್ನು ಕೇಳು! ಸತೀಮಣೀ—ಸುಮುಖೀ ದೇವಿಯ ಪ್ರಭಾವವನ್ನು ವಿವರಿಸುವೆನು.

## ಕಥಾರಂಭವು

||ಆರ್ಯಾ||

ಧರೆಯೊಳು ಮೆರೆವಾ ಸುಧರ್ಮ-ಪುರಿಯಂ ಪರಿಪಾಲಿಪನಾ ದ್ಯುತಿಮಂತಂ|
ನರಪತಿ ಗಾರೆಣೆ ಯಿಲ್ಲೆನೆ ಮೆರೆಯುವ ವರಗುಣಯುತ ನಾಧೀಮಂತಂ||
ಆ ರಾಯನರಸಿ ಶುಭಾಂಗಿ, ಗಾರೆಣೆ ನಾರೀ ಗಡಣದಿ ನಾಕಾಣೆ ||
ಚಾರುತೆ ಸದ್ಗುಣ ಭೂಷಿತೆ ನೀರಸ ಸಾರಸುಖಪ್ರದೆ ಯೆನ್ನಾಣೆ ||೨||
ಆ ರಾಜ್ಯದಿ ಕುಂಬಾರನದೋರ್ವಂ ನಾರೀಮಣಿಯೊಡಗೊಂಡಲ್ಲಿ ||
ಸಾರಸ ನಯನನ ಪಾದಸರೋರುಹ ಕಾರಡಿ ಯಂತಿಹ ಭಕ್ತಿಯಲಿ ||೩||
ಆಶ್ರಿತವತ್ಸಲ ನೆನಿಸಿದ ಶೇಷಗಿರೀಶನವರದಿಂ ದಾಸರೊಳು |
ಭೂಸುರ ಮುಖಿಯುದಯಿಸೆ ಸಂತೋಷ ಕೇಶವನಿ ನೊಲವೆಂದಾಡಿದರು||

(ವಚನ)

ಹೀಗೆ ಬಹುಕಾಲಾನಂತರದಲ್ಲಿ ಭಗವದನುಗ್ರಹದಿಂದ ಹುಟ್ಟಿದ ಹೆಂಗೂಸನ್ನು ನೋಡಿ. ಆ ಕುಲಾಲದಂಪತಿಗಳಿಗಾದ ಆನಂದೋತ್ಸಾಹಗಳನ್ನು ವಿವರಿಸಲಾದೀತೇ? ಅದಿರಲಿ; ವರಪ್ರಸಾದದಿಂದ ಹುಟ್ಟಿದ ಶಿಶುವಿಗೆ ರೂಪ ಲಾವಣ್ಯಕ್ಕೊಪ್ಪುವಂತೆ, 'ಸುಮುಖೀ' ಎಂದೇ ನಾಮಕರಣವನ್ನು ಮಾಡಿ, ಮಗಳ ಅಂದ ಚೆಂದಗಳನ್ನು ನೋಡಿ ನೋಡಿ ಬೆರ

ಗಾಗುತ್ತ ಪರಮಾತ್ಮನನ್ನು ಸ್ತುತಿಸುತ್ತಿದ್ದರು. ಇನ್ನು ಕೇಶವಪ್ರ
ಸಾದದಿಂದ ಹುಟ್ಟಿದ ಸುಮುಖಿಯ ಸೊಬಗು ಹೇಗಿತ್ತೆಂದು ಹೇಳುವೆನು-

ಕೇಳುರು

(ರಂಜಿಸಿದಳು ನಾರಿ)

ಬಣ್ಣಿಪೆ ನಾನೆಂತು || ಬಾಲೆಯ ಸೊಬಗಿಂತು ||ಪ||
ನಗೆ ಮೊಗವು ಕನ್ನಡಿ ಕದಪುಗಳು | ಚಿಗುರನಣಕಿಪಕರತಲಗಳು ಸಂ |
ಪಿಗೆಯ ನಳಿಗಳೆನಾಸಿಕದಿರವು | ಪೊಗರೊಗುವಾ ಮಿಗೆ ತೊಂಡುಟಿ
ಚಲುವು| ಬೊಗಸೆಗಣ್ಗಳ ದುಂಬಿಗುರುಳ್ಗಳ | ಸೊಗಸನು ವರ್ಣಿಸಲೆ
ನೆಗಸದಳವು ||ಬಣ್ಣಿಪೆ||

(ವಚನ)

ಹೀಗೆ ಸೌಂದರ್ಯದಿಂದ ಮೆರೆಯುತ್ತಿರುವ ಬಾಲೆಯ ಆಟಪಾಟ
ಗಳು ಹೇಗಿದ್ದುವೆಂದರೆ.

(ಮೇಲಿನಮಟ್ಟು)

ಆಡಳು ಆಟವನೊಡನಾಡಿಯರೊಳು | ಮಾತಾಡಳು ನಗಳು ಮೌನದೊ
ಳಿಹಳು || ಕಾಡುವಸಖಿಯರ ಕೋಪಿಸದಿಹಳು | ಬೇಡಳ ದೇನೊಂದಾ
ರೊಳಗವಳು || ಮೂಡಿದ ಭಕ್ತಿಯ ಜಡಭಾವದೊಳು | ಪಾಡುವಳು
ಶೇಷಗಿರೀಶನಮಿಗಿಲು ||೨|| ಅಷ್ಟೇ ಅಲ್ಲ

||ಕಂದ||

ಹರಿನಾಮಾಮೃತ ಪಾನದಿ | ತರಳೆಗೆ ನಲವೇರೆ ನಲಿವಳಾಡುವಳೊಲವಿಂ||
ಪರನಂ ಚಿಂತಿಸಿ ಕಣ್ಬನಿ| ಗರೆವಳ್ ಮೈಮರೆ ಮೊರಗುವ ಳೆರಗುವ ಳಿಳೆ
ಯೊಳ್ ||

(ವಚನ)

ಹೀಗೆ ಜನ್ಮಾಂತರದ ಸುಕೃತ ವಿಶೇಷದಿಂದುಂಟಾದ ಸಹಜ ಪ್ರಜ್ಞೆಯಿಂದ ತನ್ನಲ್ಲಿತಾನೆ ಆಡುವಳು, ನೋಡುವಳು, ನಗುವಳು, ಕೂಗುವಳು, ಕುಣಿವಳು, ಕೈಗಳನ್ನೆತ್ತಿ ಮುಗಿದು ಹಾರುವಳು, ಚೀರುತ್ತ ಕೆಳಗೆ ಬೀಳುವಳು, ಹಾಗೆಯೇ ಮೈಮರೆದು ಮಲಗುವಳು ಮತ್ತೆ ಏಳುವಳು--ಹೀಗೆ ಹಲವು ಬಗೆಯಾಗಿ ಆಡುತ್ತಿರುವ ಮಗಳನ್ನು ನೋಡಿ, ಇವಳ ಜಾಯಮಾನ ವಿಂತಹದೆಂದರಿಯದೆ ಕುಂಬಾರನ ಕಡೆಯವರೆಲ್ಲರೂ "ಅಯ್ಯೋ ಪಾಪ! ನಮ್ಮ ಮುದಿ ಕುಂಬಾರನಿಗೆ ಕಡೆಗಾಲಕ್ಕೆ ಹುಟ್ಟಿದ ಹುಡುಗಿ, ಹೀಗೆ ಹುಚ್ಚಳಾಗಬಹುದೆ ? ಇದೇ ದೈವೇಚ್ಛೆಯೇ ? ಹರಿ ಹರಿ ! ಇಷ್ಟೊಂದು ಸೌಂದರ್ಯವನ್ನುಂಟು ಮಾಡಿದ್ದರೂ, ಈ ಹುಡುಗಿಗೆ ಹೀಗೆ ಹುಚ್ಚನ್ನೇಕೆ ಕೊಟ್ಟಿರುತ್ತೀಯೆ ? ಚೆಲುವೆಯಾದರೂ, ಮರುಳಾಗಿರುವ ಇವಳಿಂದ ತಾಯ್ತಂದೆಗಳಿಗೆ ನಲವೇನು ? " ಹೀಗೆ ಹಲವು ಬಗೆಯಾಗಿ ಹೇಳಿಕೊಳ್ಳುತ್ತಿದ್ದರು. ಆದರೇನು? ಹೆತ್ತವರೂ ಹಾಗೆಯೇ ಹೇಳಬಹುದೆ? ಅಂತಃ ಜ್ಯೋತಿಸ್ವರೂಪವನ್ನು ಸಾಕ್ಷಾತ್ತಾಗಿ ನೋಡಲಾಗದಿದ್ದರೂ, ಆದರ ಶಾಂತಕಿರಣಗಳಿಂದ ಸಮಾಧಾನಗೊಳ್ಳುವಂತೆ, ಮಗಳು, ಪ್ರಾಪಂಚಿಕ ಸ್ಥಿತಿಗತಿಗಳಲ್ಲಿ ಉಪೇಕ್ಷಕಳಾಗಿದ್ದರೂ, ಇತರ ತಾಮಸ ವ್ಯಾಪಾರಕ್ಕೆರಗದಿದ್ದುದನ್ನು ಕಂಡು, ತಾಯ್ತಂದೆಗಳು ಇದ್ದುದರಲ್ಲಿಯೇ ತೃಪ್ತರಾಗುತ್ತಿದ್ದರಲ್ಲದೆ, " ಹರಿವರಪ್ರಸಾದದಿಂದ ಹುಟ್ಟಿದ ಮಗಳು, ಅಕ್ಷಯ ಸುಖವನ್ನೇ ಕೊಡದಿರಲಾರಳು " ಹೀಗೆ ದೃಢವಾಗಿ ನಂಬಿದ್ದರು.

ಹೀಗಿರಲು, ಸುಮುಖಿಯು ಕ್ರಮವಾಗಿ ಬಾಲ್ಯವನ್ನು ಮೀರುತ್ತ ಬಂದು, ಯೌವನೋನ್ಮುಖಿಯಾಗುತ್ತಿರುವುದನ್ನು ಕಂಡು, ಮುದಿ

ಕುಂಬಾರನು, ತನ್ನ ಬಂಧು ವರ್ಗಕ್ಕೆ ಸೇರಿದ್ದ ಒಬ್ಬ ಅನಾಥನಾದ ಮಂದ ಪ್ರಜ್ಞನೆಂಬವನು ಕರೆತಂದು, ಸುಮುಖಿಯನ್ನಿತ್ತು ಮದುವೆ ಮಾಡಿ, ಅಳಿಯನಿಗೂ ಮಗಳಿಗೂ ಹೇಳಬೇಕಾಗಿದ್ದ ಹಿತವನ್ನು ಹೇಳಿ, ಕುಲದ ಪದ್ಧತಿಗಳನ್ನು ಕಲಿಯಿಸಿ, ಕೆಲವು ದಿನಗಳೊಳಗಾಗಿಯೇ ಕಾಲ ಗತಿಯನ್ನು ಹೊಂದಿ, ಇಹಲೋಕವನ್ನು ಬಿಟ್ಟು ಹೊರಟು ಹೋದರು.

ಮಾತಾಪಿತೃವಿಯೋಗವಾದ ಬಳಿಕ ಸುಮುಖಿಯ ಗತಿಯೇನು? ಹುಟ್ಟಿದುದು ಮೊದಲು, ಈ ವರೆಗೂ ಕಷ್ಟಪಟ್ಟವಳಲ್ಲದ - ಸುಖದಿಂದಲೇ ಎಂದಿಗೆ-ತಾಯ್ತಂದೆಗಳ ಅಕ್ಕರೆಯಿಂದಲೇ ಬೆಳೆದ ಸುಮುಖಿಯು, ಈಗೇ ನುಮಾಡಬೇಕು ? ಕಷ್ಟಪಡಲಾರೆನೆಂದರೆ ಹೊಟ್ಟೆತುಂಬುವ ಬಗೆ ಹೇಗೆ? ಎಷ್ಟೆಷ್ಟು ಬಗೆಯಾಗಿ ಹಲುಬಿದರೂ ಏನೂತೋರಲೊಲ್ಲದು. ಮತ್ತೇನು? ಪತಿಯು ಹೇಳಿದಂತೆ ಕೇಳುವುದೊಂದೇ ಅಲ್ಲವೇ ? ಮಂದ ಪ್ರಜ್ಞನು ಈಗ ಕಣ್ದೆರೆದನು. ಪತ್ನಿಯನ್ನು ತನ್ನ ಕಾರ್ಯದಲ್ಲಿ ಕಟ್ಟು ಮಾಡಿದನು. ಸುಮುಖಿಯುಕೂಡ, ಪತಿಯ ಹಿತಕ್ಕಾಗಿ, ಕೇವಲ ಪತಿಯ ಉಪಚಾರ ಕ್ಕಾಗಿ, ಈಗ ಮಾನವೀ ವ್ಯಕ್ತಿತ್ವವನ್ನು ಅಂಗೀಕರಿಸಿ, ತನ್ನ ಮುಂದಿನ ಕರ್ತವ್ಯದಲ್ಲಿ ಕಣ್ಣಿಟ್ಟಳು. ಹೇಗೆಂದರೆ:—

|| ಆರ್ಯಾ ||

ಒಡನಾಡಿಯರೊಡಗೂಡುತ ನಡೆಯುತ್ತೆ ಮೌನದಿ ಮಣ್ಣಂತರ
ಲೆಂದು || ಮಡದಿಯು ತಂದಿತ್ತುದರಿಂ ಗಡಿಗೆ ಮಡಿಕೆಗಳಮಾಡುವನಪ
ನಂದು ||೧|| ಒಡೆಯನುಮಾಡಿದಪಾತ್ರೆಗಳೊಡನೊಡನೊಯ್ಯುತಮಾರು
ವಳೇನೆಂಬೆ || ದೃಢಭಾವದಿಬಂದುದರೊಳು ಸಡಗರಗೊಳ್ಳುವಳಾಸುಗುಣಾ
ಲಂಬೆ ||೨|| ಇಂತಿಹರಾ ಸತಿಪತಿಗಳ್ ಸ್ವಾಂತದೊಳಾಪರಮಾತ್ಮನ ಭಜಿ
ಸುತಲಿ | ಕಾಂತನು ಶೇಷಗಿರೀಶನೆಸಂತತಪಾಲಿಪ ನವನೆಂದೆನ್ನುತಲಿ ||೩||

( ವಚನ )

ಹೀಗೆ ಸತಿಪತಿಗಳು ಅನ್ಯೋನ್ಯವಾದ, ಅನುರಾಗ ಪಾಶಬದ್ಧರಾಗಿ, ನಿಜ ಕರ್ತವ್ಯ ನಿಷ್ಠೆಯಿಂದ ಮತಾಚಾರ, ಕುಲಪದ್ಧತಿಗಳನ್ನು ಅನುಸರಿಸಿ, ಮಿತಾಹಾರಿಗಳಾಗಿ, ಮಿತಭಾಷಿಗಳಾಗಿ, ಮಿತವ್ಯಯ-ಅಮಿತಾನಂದಗಳಿಂದ ಕಾಲ ಯಾಪನೆ ಮಾಡುತ್ತಿದ್ದರು. ಆದರಲ್ಲಿಯೂ, ಸುಮುಖಿಯ ಸ್ವಭಾವವು ಅವರ್ಣನೀಯವು. ಎಂದರೆ—ನಾಪಾಡಿ ಹೆಂಗಳಂತೆ ಕುರುಡು ಕವಡೆಗೂ ಬಾಳದ ಭಂಡ ಹೆಂಗಸಾಗಿರಲಿಲ್ಲ. ಮತ್ತೇನು ? ಸ್ತ್ರೀಜಾತಿ ಸಾಮಾನ್ಯವನ್ನೇ ಆಕ್ರಮಿಸಿರುವ ಅಹಂಕಾರ ಅಸೂಯೆ, ಹಠ ಮೊದಲಾದ ದುರ್ಗುಣಗಳು ಇವಳಲ್ಲಿರಲಿಲ್ಲ. ಹೆಂಗಸರು ಹಿಡಿದ ಹಠವನ್ನು ಬಿಡಲಾರರೆಂಬುದೂ, ಹಠ ಸಾಧನೆಗಾಗಿ ಗಂಡನ ಪ್ರಾಣವನ್ನಾದರೂ ತೆಗೆಯಲು ಹಿಂತೆಗೆಯದಿರುವರೆಂಬುದೂ ಸರ್ವಶ್ರುತವಾಗಿರುವ ವಿಷಯವಾದರೂ, ಸುಮುಖಿಯ ವಿಚಾರವಾಗಿ ಹಾಗೆ ಹೇಳಬಾರದು. ಸುಮುಖಿಯಂತಹ ಸಾಧ್ವೀಮಣಿಯರು ಒಬ್ಬಿಬ್ಬರಂತಿರುವರಲ್ಲದೆ, ಸ್ತ್ರೀಯರೆಲ್ಲರೂ ಹಾಗೆಯೇ ಇರುತ್ತಾರೆಂದು ಹೇಳುವಂತಿಲ್ಲ. ಇದೇ ಪದ್ಧತಿಯೇ ಮೊದಲಿಂದಲೂ ನಡೆದು ಬಂದಿರುವುದು. ಹೇಗೆಂದರೆ—ಇದಕ್ಕೆ ದೃಷ್ಟಾಂತವಾಗಿ ಒಂದು ಇತಿಹಾಸವನ್ನೇ ಮುಂದಿಡಬೇಕಲ್ಲವೆ ?

ಪೂರ್ವದಲ್ಲಿ, ದಶರಥರಾಯನು ತನ್ನ ಹಿರಿಯ ಮಗನಾದ ರಾಮಚಂದ್ರನಿಗೆ ಯೌವರಾಜ್ಯ ಪಟ್ಟಾಭಿಷೇಕ ಮಾಡಲು ಪ್ರಯತ್ನಪಟ್ಟ ವೇಳೆಯಲ್ಲಿ, ಕರ್ತವ್ಯ ಜ್ಞಾನ ಶೂನ್ಯಳಾದ ಕೈಕೆಯು, ತನ್ನ ಮಗನಾದ ಭರತನಿಗೆ ರಾಜ್ಯಪಟ್ಟಾಭಿಷೇಕವಾಗಬೇಕೆಂದೂ, ರಾಮನನ್ನು ವನಕ್ಕಟ್ಟಬೇಕೆಂದೂ ಹಟತೊಟ್ಟು, ಸತ್ಯಕ್ಕೆ ಕಟ್ಟುಬಿದ್ದ ತನ್ನ ಪತಿ

ಯಾದ ದಶರಥರಾಯನು ಪ್ರಾಣಬಿಟ್ಟರೂ ಬಿಡಲೆಂದು ಪಟ್ಟು ಹಿಡಿದ ವೇಳೆಯಲ್ಲಿ,—ಪುತ್ರವಿರಹ ಸಂತಪ್ತನಾದ ದಶರಥನನ್ನು, ನೋಡಿ— ಸುಮಂತ್ರನು ಕೈಕೇಯಿಯನ್ನು ಕುರಿತು ಹಲವು ಬಗೆಯಾಗಿ ನಿಂದಿಸುತ್ತಾ ಹೀಗೆ ಹೇಳಿದನಂತೆ.

"ಸಾಧುಕುಲ ಶಿರೋಮಣಿಯಾದ ಕೇಕಯರಾಜನಿಗೆ ಮಗಳಾಗಿಯೂ, ಇವಳು ಇಂತಹ ಕೆಟ್ಟ ಹಟವನ್ನು ತೊಟ್ಟು, ಗಂಡನ ಪ್ರಾಣವನ್ನೇ ತೆಗೆಯಲಿಕ್ಕಿರುವುದನ್ನು ಕುರಿತು ಏನೆನ್ನಬೇಕು? ತಾಯಿಯ ಗುಣವೇ ಮಕ್ಕಳಲ್ಲಿ ಮೂಡಿರುವುದೆಂದು ಹೇಳುವುದು, ನಿಜವಲ್ಲವೆ? ಸಂದೇಹವೇನು? ಇವಳ ತಾಯಿಯೊಡನೆ ಕೇಕಯರಾಜನು ಒಂದು ದಿನವೇಕಾಂತಶಯ್ಯೆಯಲ್ಲಿ ಮಲಗಿ ನಿದ್ರಿಸುವಂದು, ಇವರು ಮಲಗಿದ್ದ ಮಂಚದ ಕೆಳಗೆ ಸಾಲಾಗಿ ಇರುವೆಗಳು ಬಂದು, ನೋಡಿ, ತಮ್ಮ ನೆಲೆಗೆ ಹೋಗಲು ಅಡ್ಡವಾಗಿದ್ದ ಮಂಚದ ಕಾಲನ್ನು ಕಂಡು, ಇರುವೆಗಳಲ್ಲಿ ಮುಂದಾಗಿದ್ದುದು, ತನ್ನ ಹಿಂದಿದ್ದುವುಗಳನ್ನು ಕುರಿತು, 'ತಾಳಿರಣ್ಣ ತಾಳಿರಿ, ಮುಂದೆ ಬರಬೇಡಿರಿ, ದಾರಿಗಡ್ಡವಾಗಿ ಮಂಚದಕಾಲುಗಳಿವೆ, ಎಂದು ಹೇಳಿತು. ಅದಕ್ಕೆ ಹಿಂದಿದ್ದ ಮತ್ತೊಂದು ಇರುವೆಯು ದರ್ಪದಿಂದ 'ಓಹೋ! ಅಣ್ಣ! ಅದೇನು, ಮಹಾಘನಕಾರ್ಯವೆಂದು ಹೆದರುವೆ? ನಾವೆಲ್ಲರೂ ಒಕ್ಕಟ್ಟಿನಿಂದ ಈ ಮಂಚದಕಾಲನ್ನು ಎತ್ತಿ ರಾಜನಿಗೆ ಎಚ್ಚರವಾಗದಂತೆ ಕದಲಿಸಿ ಅತ್ತಕಡೆಗಿಡಲಾಗುವುದಿಲ್ಲವೋ? ಒಕ್ಕಟ್ಟಿಗೆ ಆಗದ ಕಾರ್ಯವಾವುದಾದರೂ ಇದ್ದೀತೋ! ಎಂದು ಉತ್ತರವನ್ನು ಕೊಟ್ಟಿತು.

ನಿದ್ದೆ ಬಾರದೆ ಹಾಗೆಯೇ ಮಲಗಿದ್ದ ರಾಜನು, ಇರುವೆಯ ಮೊನೆಮಾತುಗಳನ್ನು ಕೇಳಿ, ಈ ತಿರ್ಯಗ್ಜೀವಿಗಳಲ್ಲಿಯೂ ಇಷ್ಟು ಸಾಹಸವಿರುವುದೇನೆಂದು ಪರಿಹಾಸ ಮಾಡುತ್ತ ಬಲವಾಗಿ ನಕ್ಕುಬಿಟ್ಟನು. ಹೀಗೆ

ನಕ್ಕುಬಿಟ್ಟ ರಾಜನನ್ನು ನೋಡಿ ಆ ಇರುವೆಯು ಆಗ್ರಹದಿಂದ “ಎಲಾ! ಅಹಂಕಾರಿಯಾದ ಅರಸನೇ! ನೀನು ನಮ್ಮನ್ನು ತಿರ್ಯಗ್ಜೀವಿಗಳೆಂದೆಣಿಸಿ, ಹಾಸ್ಯಮಾಡಿದೆಯಲ್ಲವೆ? ಇರಲಿ. ಈ ಪ್ರಸ್ತಾಪವು ನಿನ್ನ ಬಾಯಿಂದ ಹೊರಬಿದ್ದೊಡನೆಯೇ ನಿನ್ನ ತಲೆಯು ಚೂರುಚೂರಾಗಿ ಹೋಗುವುದೆಂದು ತಿಳಿದಿಟ್ಟಿರು” ಎಂದು ಶಪಿಸಿ ಹೊರಟುಹೋದುವು.

ಕೇಕಯರಾಜನು, ಇರುವೆಯ ಶಾಪಕ್ಕಾಗಿ ಮತ್ತೂ ಚಕಿತನಾಗಿ, ಮತ್ತೊಂದು ಬಾರಿ ಬಲವಾಗಿ ನಕ್ಕುಬಿಟ್ಟನು. ಇವನು ನಕ್ಕುದನ್ನು ಕೇಳಿ ಮಲಗಿದ್ದ ಈತನ ಪತ್ನಿಯು ಎಚ್ಚೆತ್ತು ಪತಿಯಲ್ಲಿ ಸಂಶಯದಿಂದ ಕೇಳಿದಳು.

“ಹೀಗೆ ಪರಿಹಾಸದಿಂದ ನಗಲು ಕಾರಣವೇನು? ನನ್ನಲ್ಲಿ ಯಾವ ದೋಷವನ್ನು ಕಂಡು ನಗಬೇಕು? ಅಲ್ಲದಿದ್ದರೆ ಈ ವೇಳೆಯಲ್ಲಿ ಮತ್ತಾವ ಅಂಗನೆಯಾದರೂ ನೆನಪಿಗೆ ಬಂದಳೋ, ಹೇಗೆ? ಏನಾಗಿದ್ದರೂ ಮರೆಮಾಚದೆ ಹೇಳಬೇಕು.”

ಕೇಕಯರಾಜನು ಪತ್ನಿಯಮಾತಿಗೆ ಉತ್ತರವೇನನ್ನು ಕೊಡಬೇಕು? ‘ನೀನು ಇದನ್ನು ಕೇಳುವುದೂ ಸರಿಯಲ್ಲ. ನಾನು ಹೇಳತಕ್ಕುದೂ ಅಲ್ಲ. ಇದರಿಂದ ನನ್ನ ಪ್ರಾಣಹಾನಿಯಾಗುವ ಸಂಭವವುಂಟು.’ ಎಂದು ಎಷ್ಟೋಬಗೆಯಿಂದ ಹೇಳಿದರೂ ಕೇಳದೆ, ಒಂದೇ ಪಟ್ಟಿನಿಂದ “ಅದು ವಾಗಲಿ, ಹೇಳಲೇಬೇಕು. ಇಲ್ಲವಾದರೆ ಈಗಲೇ ಸ್ತ್ರೀಹತ್ಯೆಯನ್ನು ತಲೆಗೆ ಕಟ್ಟುವೆನು. ಎಂದಿಂತು ಹಂಡಿಸಿದಳು. ಆ ಬಳಿಕ ಪಾಪ! ಅವನೇನು ಮಾಡಬೇಕು? ತನ್ನ ಪ್ರಾಣಹೋದರೂ ಸರಿ, ಹೆಂಡತಿಯ ಪ್ರಾಣವುಳಿದರೆ ಸಾಕೆಂದು ಬಗೆದು ಪತ್ನಿಯನ್ನೂ ಜತೆಗೊಂಡು ಸ್ಮಶಾನಕ್ಕೆ ನಡೆತರುತ್ತಿದ್ದನು.

ಪತ್ನಿಯ ನಿಷ್ಠುರಕ್ಕಾಗಿ ಸೋತಮನಸ್ಸಿನಿಂದ ಮೃತ್ಯುವನ್ನಿದಿರುಗೊಳ್ಳಲು ಬರುತ್ತಿದ್ದ ಕೇಕಯರಾಜನನ್ನು ನೋಡಿ, ದಾರಿಯಲ್ಲಿ ನಿಂತಿದ್ದ ಪುರುಷ ಮೇಷವೊಂದು, ತನ್ನ ಬಳಿಯಲ್ಲಿ ಚಂಡಿಸುತ್ತಿದ್ದ ಸ್ತ್ರೀ ಮೇಷವನ್ನು ಧಿಕ್ಕರಿಸಿ, “ ನಿನ್ನ ಈ ಬಗೆಯ ಮಾಯಾಜಾಲಕ್ಕೆ ಮರುಳಾಗಿ, ಕರ್ತವ್ಯವನ್ನು ಬಿಟ್ಟು, ಸುಖಬಾಹಿರನಾಗಲು, ನಾನೇನೂ ಕೇಕಯರಾಜನಂತೆ ಬುದ್ಧಿ ಶೂನ್ಯನಾಗಿಲ್ಲ. ಪತ್ನಿಯನ್ನು ಧಿಕ್ಕರಿಸಲಾರದೆ, ಮೃತ್ಯುವನ್ನೇ ಆಲಿಂಗಿಸಲು ಹೋಗುತ್ತಿರುವ ಈ ರಾಜನಂತೆ, ನಾನು ನಿನ್ನ ಹಠಕ್ಕಾಗಿ ಭೀತನಾಗುವಂತಿಲ್ಲ. ” ಹೀಗೆ ಹೇಳಿ, ಅಲ್ಲಿ ನಿಲ್ಲದೆ ಹೊರಟುಹೋಯಿತು. [ ಇಲ್ಲಿ ವಿಷಯ ನಿರೂಪಣವು ಸ್ವಲ್ಪ ವ್ಯತ್ಯಸ್ತವಾಗಿದ್ದರೂ ಇರಬಹುದಾಗಿ ವಾಚಕರಲ್ಲಿ ಕ್ಷಮೆಯನ್ನು ಕೋರಿದೆ.]

ಮೇಷದಿಂದ ಹೇಳಲ್ಪಟ್ಟ ಈ ಹಿತವಾದವನ್ನು ಕೇಳಿ, ರಾಜನು ಜಾಗ್ರತನಾಗಿ, ಪತ್ನಿಯನ್ನು ಧಿಕ್ಕರಿಸಿ–ಶಿಕ್ಷಿಸಿ ಬಂದು, ನ್ಯಾಯಮಾರ್ಗದಿಂದ ರಾಜ್ಯಪರಿಪಾಲನ ಮಾಡಲಾರಂಭಿಸಿದನು.

ಪತಿಯ ಪ್ರಾಣವನ್ನು ತೆಗೆದಾದರೂ ತನ್ನ ಹಟವನ್ನು ಸಾಧಿಸುವುದೇ ಗೌರವವೆಂದು ನಂಬಿ, ಹಟವನ್ನು ಹಿಡಿದಿದ್ದ ಆ ತಾಯಿಯ ಮಗಳಾದ ಈ ಕೈಕೆಗೆ ರಾಜನ ಜೀವಿತದಿಂದ ಫಲವೇನು? ಛೀ! ಛೀ!! ಹಟಮಾರಿಯಾದ ಹೆಂಗಸಿನೊಡನೆ ವಾಸಮಾಡುವದಕ್ಕಿಂತಲೂ, ಹಿಂಡು ಪಿಶಾಚಗಳೊಡನೆ ಆಡಬಹುದು” ಹೀಗೆ ಹಲವು ಬಗೆಯಾಗಿ ದೂಷಿಸುತ್ತಿದ್ದಂತೆಯೆ, ದಶರಥರಾಯನೂ ಮಗನನ್ನು ಅಗಲಿರಲಾರದೆ, ಹಂಬಲಿಸಿ ಪ್ರಾಣ ಬಿಟ್ಟನು. ಹಾಗೆ—ಪತಿಯ ಪ್ರಾಣವನ್ನೇ ತೆಗೆದು, ತನ್ನ ಹಟವನ್ನು ಸಾಧಿಸಿಕೊಂಡೇನೆಂದು ಉಬ್ಬಿದ ಕೈಕೇಯಿ ಮತ್ತು ಅವಳ ತಾಯಿಯವರಂತೆ ಈ ಕಾಲದಲ್ಲಿ ಹಲವು ಮಂದಿ ಹೆಂಗಸರು ಇರುತ್ತಾರೆ. ಇವರು

ತಮ್ಮ ಕಾರ್ಯವು ಅಥವಾ ಉದ್ದೇಶವು, ಎಷ್ಟೇ ಪ್ರಮಾದಕರವಾಗಿರಲಿ; ಪರ್ಯಾಲೋಚಿಸದೆ ಹೇಗಾದರೂ ಅದನ್ನು ನಡೆಯಿಸಿಯೇ ಬಿಡುವರಲ್ಲದೆ, ಹಾಗೆ ಮಾಡುವುದೇ ತಮಗೆ ಗೌರವವೆಂದೂ, ಅತ್ತೆಮಾವರೇ ಮೊದಲಾದ ಗುರುಹಿರಿಯರಿಗೆ ವಿನೀತರಾಗಿರುವುದೂ, ಅತ್ತಿಗೆ, ನಾದಿನಿ, ಓರಗಿತ್ತಿಯರಲ್ಲಿ ಸಹಜ ಸೌದರ್ಯಭಾವದಿಂದ ವರ್ತಿಸುವುದೂ ಅಪಮಾನಕರವೆಂದು ತಿಳಿದು, ತಮ್ಮ ಚಿತ್ತದಲ್ಲಿ ದುರಭಿಮಾನ, ಅತ್ಯಾಶೆ, ಅಸೂಯೆಗಳೇ ಮೊದಲಾದ ದುರ್ಗುಣಗಳನ್ನು ಅಡಕಿರಿಸಿದು ತುಂಬಿ, ತಮ್ಮ ಉಚ್ಛೃಂಖಲ ಪ್ರವರ್ತನೆಯಿಂದ ಸ್ತ್ರೀ ಸಾಮಾನ್ಯವನ್ನೇ ದೌರ್ಜನ್ಯಕ್ಕೆ ಗುರಿಮಾಡಿರುವರೆಂಬುದು, ನಮ್ಮ ಮಹಿಳಾಮಣಿಯರಲ್ಲಿ ಬಹು ಜನರು ತಿಳಿಸೇ ಇರುತ್ತಾರಲ್ಲವೇ! ಆದರೆ, ನಮ್ಮ ಸುಮುಖಿಯನ್ನು ಕೂಡ, ಅವರಂತೆಯೇ ಭಾವಿಸುವರೋ? ಕೂಡದು; ಹಾಗೆಂದಿಗೂ ಭಾವಿಸಕೂಡದು, ಏಕೆಂದರೆ—

ರಾಗಾ-ಹುಶೇನಿ | (ಬಂದಳಲ್ಲಿಗೆ ಸುಂದರಾಂಗಿಯು)

ಏನನೆಂಬೆನು ಜ್ಞಾನನಿಧಿಯಾ ಮಾನಿನೀಮಣಿಶೀಲವ ||
ಸಾನುರಾಗದಿ ಪತಿಯಸೇವೆಯ ನ್ಯೂನವಿಲ್ಲದೆ ಮಾಳ್ಪಳಾ || ಏನ ||ಅ||
ಪತಿಯವಾಕ್ಯವ ಮೀರಿನಡೆಯದೆ ,ಪತಿಯಸೇವೆಯೊಳಲಸದೆ |
ಪತಿಯ ಧ್ಯಾನವ ಮರೆಯದಂದದೆ ಪತಿಯ ಗುಣಗಳ ಜರೆಯದೆ ||
ಅತಿಥಿಯಭ್ಯಾಗತರ ಪೂಜಿಪಳತಿಶಯವದೇನೆಂಬನೈ |
ಪತಿತಪಾವನ ಶೇಷಗಿರಿಶನೇ ಗತಿಯು ತಮಗೆಂದಿರ್ಪಳೈ ||೨||

ಮತ್ತೂ

||ಕಂದ || ಕಾಯಮನೋವಾಕ್ಕಿನೊಳುಂ | ತೋಯಜಮುಖಿ, ನಿಜಪತಿ
ಯೇಪರನೆಂದೆನುತಂ || ಪಹಾಯಮುದಂಗಳವರ್ಜಿಸಿ | ಕಾಯಜಪಿತನಂ
ಭಜಿಸುವಳೈ ಪತಿವೆರಸಿ ||

(ವಚನ)

ಹೀಗೆ ಪತಿಪಾದಸೇವೆಯೊಂದೇ ತನಗೆ ಗತಿಯಲ್ಲದೆ ಬೇರಿಲ್ಲವೆಂದಿದ್ದ ಸುಮುಖಿಯು, ಒಂದಾನೊಂದು ದಿನದಲ್ಲಿ, ತನ್ನ ನೆರೆಹೊರೆಯ ಹೆಂಗಸರೊಡನೆ, ಮಣ್ಣನ್ನು ತರಲು ಹೋಗಿದ್ದು, ಬರುತ್ತಿರುವಾಗ ಬಲವಾದ ಮೋಡವು ಕವಿದು, ಕತ್ತಲೆಯಾಗುತ್ತಿರಲು ನೋಡಿ; ಜತೆಯವರೆಲ್ಲರೂ ಆತುರದಿಂದ ಓಡಿಹೋದರು. ಸುಮುಖಿಯುಮಾತ್ರ, ಒಂಟಿಯಾಗಿ ಬರುತ್ತಿದ್ದವೇಳೆ, ಘಟ್ಟಿಯಾಗಿ ಮಳೆಯೂ ಬಂದು, ತಲೆಯಮೇಲೆ ಹೊತ್ತಿದ್ದ ಮಣ್ಣಿನಗೂಡೆಯು ನೀರಿನಿಂದ ನೆನೆದು, ಭಾರವಾಗಿ ಕೆಳಗೆ ಬಿದ್ದುಹೋಯಿತು. ಆಗ ಅವಳೇನು ಮಾಡಬಲ್ಲಳು ? ಪಾಪ ! ಕಣ್ಕಾಣದ ಕತ್ತಲೆ, ಕಾರ್ಮುಗಿಲು, ಮೇಲೆಮೇಲೆ ಮಿಂಚು, ಗುಡುಗು, ಸಿಡಿಲುಗಳ ಆಟೋಪ, ಸಾಲದುದಕ್ಕೆ ಜಡಿಮಳೆ;—ಇಷ್ಟು ಸಾಲದೆ ಕೊಸರಾಗಿ ಕ್ರೂರಮೃಗಗಳ ಆರ್ಭಟ—ಇವೆಲ್ಲವುಗಳಿಂದಲೂ, ಅಬಲೆಯಸ್ಥಿತಿಯೇನಾಗಿರಬೇಕೆಂದು ಹೇಳಬೇಕೆ ?

ಸುಮುಖಿಯು ಮುಂದೋರದೆ ಕಂಗೆಟ್ಟು, ತನ್ನಲ್ಲಿತಾನೆಯೇ ಹೀಗೆಂದು ಹಲುಬತೊಡಗಿದಳು. " ಈಗೇನು ಮಾಡಲಿ ! ಹೇಗೆ ಹೋಗಲಿ ? ದಾರಿತೋರುವರಾರು ? ಮಣ್ಣಿನ ಗೂಡೆಯನ್ನು ಹೊರಿಸುವವರಾರು ? ಬಿಟ್ಟುಹೋದಗೆ, ಹೊಟ್ಟೆಯ ಪಾಡು ಕಳೆಯುವುದೆಲ್ಲಿ? " ಯೋಚಿಸುತ್ತ ಯೋಚಿಸುತ್ತ ಸುಮುಖಿಯು ಚಿಂತಾಪರವಶತೆಯಿಂದ ಮೈಮರೆದು ಆರ್ತಸ್ವರದಿಂದ, ಪರಮಾತ್ಮನನ್ನು ಕುರಿತು ಹೀಗೆ ಪ್ರಾರ್ಥಿಸಿದಳು.

ರಾಗಾ (ಬಾಬಾಬಾ ದೊರೆಯೆ)

ಕಾಯ್ಕೈ ಶ್ರೀಹರಿಯೇ ಕರುಣಾ ನಿಧಿಯೇ ||ಪ||

ಘೋರಕಾನನದೊಳು—ಸೇರಿ ನರಳ ನೆನು | ದಾರಿಯತೋರುವ
ರಾರನು ಕಾಣದೆ | ಚೀರುತೆ ಬರುತಿಹ ಕ್ರೂರಮೃಗಂಗಳಾ
ಕಾರವನೀಕ್ಷಿಸಲು—ಏರಿದೆ ಭಯವು || ಕಾಯೈ ಶ್ರೀ ||೧||
ಹೊತ್ತು ಮೀರಿತಯ್ಯೋ—ಕತ್ತಲೆಯೆತ್ತಲು—ಮುತ್ತಿಹುದೇಗೈವೆ |
ಚಿತ್ತಜಪಿತನೇ || ಮತ್ತಾರಕಾಣೆನು—ಕರ್ತೃನೀನೆಂದಿಹೆನು | ಪುತ್ರವಾತ್ಸ
ಲ್ಯದಿಂ—ದೆತ್ತಿಯಾಡಿಸೆನ್ನಂ || ಕಾಯೈ ಶ್ರೀ ||೨||
ಪರಮಪಾವನಶೇಷ ಗಿರಿವಾಸಕೇಳೆನ್ನ | ವಿರಹದಿಂದರಸನು—ಮರುಗುವ
ಮನೆಯೊಳ್ || ಎರೆಯನು ಚಿಂತಿಸುತಿರಲೆಂತು ಸಹಿಪೆನಾಂ |
ಭರದಿಂದೆ ಮೈದೋರಿ—ಪರಿಪಾಲಿಸೈಹರಿ || ಕಾಯೈ ಶ್ರೀ ||೩||

(ವಚನ)

ಹೀಗೆ ಸುಮುಖಿಯು ಭಗವಂತನನ್ನು ಕುರಿತು ಮೊರೆಯಿಡಲು, ಭಕ್ತಪರಾಧೀನನಾದ ಭಗವಂತನು ಪ್ರಸನ್ನನಾದಂತೆ, ಗಗನದಲ್ಲಿ ಅದ್ಭುತ ಪ್ರಕಾಶವಾಗಿ, ಪ್ರಕಾಶದೊಡನೆಯೇ, ದಿವ್ಯಗಾನವು ಕೇಳಬಂದು, ಸುಮುಖಿಯ ಕಿವಿಗೆ ಆನಂದಾಮೃತವನ್ನು ಸುರಿಸಿ, ಅವಳು ಆಶ್ಚರ್ಯ ಚಕಿತೆಯಾಗಿ ತಲೆಯೆತ್ತಿ ನೋಡುವಂತೆ ಮಾಡಿತು. ಸುಮುಖಿಯು ತಲೆಯೆತ್ತಿ ನೋಡಿದಳು. ತನ್ನ ಮುಂದೆ ಶುಭ್ರಾಂಬರ ಧಾರಿಯಾಗಿ, ಭಗವನ್ನಾಮಸ್ಮರಣೆ ಮಾಡುತ್ತಿದ್ದ ಮಹರ್ಷಿ ಶ್ರೇಷ್ಠರಾದ ಗೌತಮರ ಸಾಕ್ಷಾತ್ಕಾರವಾಗಿದೆ! . ಹೇಳಿ—ಕೇಳುವುದೇನು? ಮೈರೋಮಾಂಚನ ದಿಂದ ಕಂಪಿಸುತ್ತ ಧಿಗ್ಗನೆದ್ದು ಮಹರ್ಷಿ ಸತ್ತಮನ ಪಾದಗಳನ್ನು ಬಲ ವಾಗಿ ಹಿಡಿದು, ಭಕ್ತಿ ಭಾವದಿಂದ ನಮಸ್ಕರಿಸಿದಳು.

ಹೀಗೆ ಅಡಿಗೆರಗಿದ ಅಬಲೆಯ ಮುಡಿದಡಹಿ ಆಶೀರ್ವದಿಸಿ, ಕಡುದಯೆಯಿಂದ ಕೇಳುತ್ತಾರೆ: ಅಮ್ಮ; ಮಗಳೇ! ನೀನಾರು? ನಿನ್ನ

ಹೆಸರೇನು ? ನೀನೊಬ್ಬಳೇ ಈ ನಟ್ಟಿರುಳಿನಲ್ಲಿ, ಈ ನಡುಕಾಡಿನಲ್ಲಿ ಹೀಗೆ ಅಳುತ್ತಿರುವ ಕಾರಣವೇನು ? ನಿನ್ನ ಮುಂದಿರುವುದೇನು ? ಎಲ್ಲವನ್ನೂ ಧೈರ್ಯದಿಂದ ಹೇಳು' ಸುಮುಖಿಯು ಗದ್ಗದಸ್ವರದಿಂದ "ಎಲೈ ತಂದೆಯೇ! ನಾನೊಬ್ಬ ಕುಂಬಾರ ಹುಡುಗಿ, ನನ್ನ ಹೆಸರು ಸುಮುಖಿಯೆಂದೂ, ಹುಚ್ಚು ಹುಡುಗಿಯೆಂದೂ ಕರೆಯುವರು. ನನ್ನ ಪತಿಯನ್ನು ಮಂದ ಪ್ರಜ್ಞನೆಂದೆನ್ನುವರು. ಇನ್ನು ನನ್ನ ಅವಸ್ಥೆಯನ್ನು ಏನು ಹೇಳಲಿ ?" ಎಂದಾಡಿ ಮತ್ತೆಯೂ ಹೇಳುವಳು.

ರಾಗಾ (ಗೀತೆ)

ಮುನಿಕುಲೋತ್ತಮ ಲಾಲಿಸೆನ್ನಯ | ಮನವಿಯೆಲ್ಲವಂ,
ಇನಿತುಮಾಜದೆ ||ಪ||

ಮಳೆಯ ಭಯದೊಳು, ಕೆಳದಿಯರ್ಕಳು | ಉಳಿದು ಪೋಗಲು,
ಉಳಿದೆ ನೋವಳಿ ||೧|| ಎತ್ತಲಾರೆನು | ನುಣ್ಣಗೂಡೆಯಂ
ಎತ್ತಿ ಹೊರೆಯಿಪ ರಿತ್ತಲರಿಯೆನು ||೨|| ಬಿಟ್ಟು ಪೋದರೆ, ಹೊಟ್ಟೆ
ಗಿಲ್ಲವೆ | ಬಟ್ಟೆಗಾಣದೆ ಬಾಯಬಿಡುವೆನೆ ||೩|| ಶರಣು ಹೊಕ್ಕೆನು
ಕರುಣೆಸೆನ್ನನು | ತರಳೆಯೆಂದು ನೀಂ ಪರಿಕಿಸೆಂಜೆನು ||೪||
ಖ್ಯಾತ ಶೇಷಗಿರಿ ನಾಥನೊಲ್ಮೆಯಿಂ | ತಾತ ನಿನ್ನನಾ ನಿತ್ತಕಂಡೆನೈ||೫||

ಹೀಗೆ ಹೇಳು ಹೇಳುತ್ತ ಮತ್ತೆಯೂ ಮುನಿಯ ಪಾದಗಳನ್ನು ಹಿಡಿದು ಬುದ್ಧಿಗಲಿಸಿ ಕಾಪಾಡೆಂದು ಮೊರೆಯಿಟ್ಟಳು. ಗೌತಮರು ಕೂಡ, ಪುತ್ರ ವಾತ್ಸಲ್ಯದಿಂದ ಸುಮುಖಿಯನ್ನು ಹಿಡಿದೆತ್ತಿ ನಿಲ್ಲಿಸಿ, ನಾಲಿಗೆಯಲ್ಲಿ ಬೀಜಾಕ್ಷರವನ್ನು ತಿದ್ದಿ, ಬಳಿಕ ಸತೀಧರ್ಮವನ್ನು ಕುರಿತು ಹೀಗೆ ಬೋಧಿಸುತ್ತಾರೆ.

ರಾಗಾ (ಹೋಗಿ ಬರಲೇನಮ್ಮ)

ಪೇಳುವೆ ಕೇಳಮ್ಮ—ಅಮ್ಮಯ್ಯ ನಾಂ ಪೇಳುವೆ ||ಪ||

ಪೇಳುವೆ ನಾನಿನಗೆ | ಪರತತ್ವಸಾರವ | ಶೀಲಸೌಭಾಗ್ಯಗೇಗನುಕೂಲವಾ ಗಿರ್ಪಧರ್ಮವ ಪೇಳುವೆ || ೧ || ಸಾಕಾರ ಬ್ರಹ್ಮಸ್ವರೂಪನಾಗಿಪ ಪತಿಯ | ನೇಕಚಿತ್ತದಿ ಸೇವಿಸುವುದೆ ಯುಕ್ತ ಧರ್ಮವು ಸತಿಯ ಗಿದು ಕೇಳ್ || ಪೇಳುವೆ || ೨ || ಪತಿ ಯಿಲ್ಲದಿಳೆಯೊಳಗೆ ಗತಿಯಿಲ್ಲ ಸತಿಯರಿಗೆ|| ಪತಿಯೆ ಪರದೈವವೆನ್ನುತೆ | ಮತಿಯೊಳಗೆ ಭಾವಿಸುವಳೆ ಸುವ್ರತೆ||೩|| ಶಮದಮಾದಿಗಳು ಮೇಣ್ ವಿಮಲ ಸತ್ಯಾದಿಗಳು ! ರಮ ಣಿಯರಿಗಾ ಭರಣವೆನಿಪುದೀ ಕ್ರಮವ ನೀ ನರಿತು ನಡೆ ||೪|| ಕೈವಿಡಿದ ರಸನ ಸೇವಿಪಸುದತಿಗೆ | ದೇವ ಶೇಷಗಿರೀಶನೊಲಿಯುಲ ದಾವ ಸಂಶಯ ವಿಲ್ಲ ಕೇಳೆಲೆ ||೫||

(ವಚನ)

'ಮತ್ತೂ ಹೇಳುವೆನು ಕೇಳು, ಮಗಳೇ? , ಎಂದಾಡಿ, ಭಗವ ದ್ಧ್ಯಾನ, ಧಾರಣಾದಿ ಅಷ್ಟಾಂಗಯೋಗಗಳನ್ನೂ ಬೋಧಿಸಿ, ಆಬಳಿಕ, ಕೆಳಗೆ ಬಿದ್ದಿದ್ದ ಮಣ್ಣಿನ ಪುಟ್ಟಿಯನ್ನು, ಸುಮುಖಿಯ ತಲೆಯಮೇಲೆ ಹೊರೆಯಸಿ, ವಿಶ್ವಾಸದಿಂದ-ಹೀಗೆನ್ನುವರು. "ಮಗಳೇ! ಇದುಮೊ ದಲು ನಿನ್ನ ತಲೆಯಮೇಲೆ ಎಷ್ಟುಭಾರವನ್ನು ಹೊತ್ತರೂ ಆದರಿಂದ ನಿನಗೆ ಆಯಾಸವಾಗಲಿ, ಭಾರವಾಗಲಿ-ಉಂಟಾಗದೆ, ನಿನ್ನ ನೆರಳನ್ನೇ ಅನುಸರಿಸಿ ಬರುವಂತೆ,—ಭಗವತ್ಪ್ರಸಾದದಿಂದಲೂ, ನನ್ನ ತಪಶ್ಶಕ್ತಿ ಯಿಂದಲೂ, ವರಸಿದ್ಧಿಯುಂಟಾಗಲೆಂದು ಹರಸಿರುವೆನು-ಇನ್ನು ಕಳವಳ ವನ್ನು ದೂರದಲ್ಲಿ ಕಟ್ಟಿಟ್ಟು, ಮನೆಗೆತೆರಳು. ಮುಂದೆ ನೀನು ನಿನ್ನ ತಪಃಪ್ರಭಾವದಿಂದ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಹೊಂದಿ, ಜನ್ಮಭೂಮಿಗೆ ಅತ್ಯಂತಪ್ರಕಾಶವನ್ನುಂಟುಮಾಡುವೆ. ಇನ್ನು ವಿಳಂ ಬಿಸಬೇಡ, ಹೊರಡು.' ಎಂದಾಡಿ, ನಿಂತಲ್ಲಿಯೇ, ಕ್ಷಣಮಾತ್ರದಲ್ಲಿ ಅಂತರ್ಧಾನರಾದರು.

ಸುಮುಖಿಯು ಕಣ್ದೆರೆದು ನೋಡಿದಳು; ಮಹರ್ಷಿಗಳನ್ನು ಕಾಣ ಲಿಲ್ಲ, ವಿಚಾರಮಾಡಿದಳು; ಮನದಲ್ಲಿಯೇ – ಧ್ಯಾನಿಸಲಾರಂಭಿಸಿದಳು. ಬಳಿಕ, ಮಹರ್ಷಿಯಿಂದ ಅನುಗೃಹೀತವಾದ ಶಾಸನಗಳನ್ನು ಸ್ಮೃತಿಪ ಥಕ್ಕೆ ತಂದು, ಜಾಗ್ರತಳಾಗಿ, ಮನೆಗೆ ಹೊರಟು ಬಂದು, ತನ್ನದಾರಿ ಯನ್ನೇ ಇದಿರುನೋಡುತ್ತ ಕುಳಿತಿದ್ದ ಪತಿಗೆ, ನಡೆದ ವಿಷ್ಯಮಾಸ ವೆಲ್ಲವನ್ನೂ ನಿವೇದಿಸಿ, ಅಂದಿನಿಂದ ಮೊದಲಿಗೂ ಹೆಚ್ಚಾದ ಶ್ರದ್ಧಾ, ಭಕ್ತಿ — ಗೌರವಗಳಿಂದ ತನ್ನ ಕರ್ತವ್ಯದಲ್ಲಿ, —ಎಂದರೆ ಪತಿಸೇವೆ ಯಲ್ಲಿ ತತ್ಪರಳಾಗಿ ನಡೆಯುತ್ತಿದ್ದಳು. ಹೀಗಿರಲು ಮತ್ತೊಂದು ದಿನದಲ್ಲಿ, ಸುಮುಖೀದೇವಿಯು, ಜತೆಯವರೊಡನೆ ಮಣ್ಣನ್ನು ತರಲು ಹೋಗಿ ಬರುವಾಗ ದಾರಿಯಲ್ಲಿ ಅಡ್ಡವಾಗಿದ್ದ ಪುಣ್ಯವಾಹಿನಿಯು, ಪೂರ್ಣವಾಹಿನಿಯಾಗಿರುವುದನ್ನು ಕಂಡು, ಜತೆಯಲ್ಲಿದ್ದ ಕುಂಬಾರಿತಿಯ ರೆಲ್ಲರೂ ಭೀತರಾಗಿ, ತಡಿಯಲ್ಲಿ ಕುಳಿತು, ಒಬ್ಬರೊಡನೊಬ್ಬರು— "ಅಯ್ಯೋ! ಅಕ್ಕ! ಈಗೇನುಮಾಡುವ? ಮಳೆ–ಮೋಡಗಳೇನೊಂದೂ ಇಲ್ಲದೆಯೇ, ಇಷ್ಟೊಂದು ಪ್ರವಾಹವು ಬಂದಿರುವುದಲ್ಲಾ! ಮುಂದೇನು ಗತಿ! ಈ ಪ್ರವಾಹವು ಇಳಿಯಬೇಕಾದರೆ ಇನ್ನೆಷ್ಟುದಿನವಾಗುವುದೋ ತಿಳಿಯದು; —ಅವರೆಗೂ ನಾವಿಲ್ಲಿಯೇ ಕಳೆಯಬೇಕಾಯಿತೇ?" ಹೀ ಗೆಂದು ವಿಲಪಿಸ ತೊಡಗಿದರು. ಇದೆಲ್ಲವನ್ನೂ ಕೇಳಿ–ನೋಡಿ ಸುಮು ಖಿಯು ಅಲ್ಲಿ ಅಳುತ್ತ ಕುಳಿತಿದ್ದವರನ್ನು ಕುರಿತು, ನಯಭಯದಿಂದ ಹೀಗೆ ಕೇಳಿದಳು—

"ಅಕ್ಕ ತಂಗಿಯರೆ! ಹೀಗೇಕೆ ಕಳವಳಿಸಿ, ಗಳಗಳನೆ ಅಳುತ್ತಿರು ವಿರಿ? ಈ ಪ್ರವಾಹವು ನಮ್ಮನ್ನೇನುಮಾಡಬಲ್ಲುದು? ಇದಕ್ಕೇಕೆ—ಇಷ್ಟರ ಹೆದರಿಕೆ? ಈ ಪ್ರವಾಹವು ಇಳಿಯುವ ವರೆಗೆ ಇಲ್ಲಿಯೇ ಕುಳಿತಿದ್ದರೆ,

ಮನೆ—ಮಂದಿಗಳ ಪಾಡೇನಾಗಬೇಕು? ನಿಮ್ಮ ಅರಸರು-ನಿಮ್ಮನ್ನು ಬಿಟ್ಟಿರಬಲ್ಲರೇನು? ನಾನಿದೋಹೊರಟಿರುವೆನು. ಇಷ್ಟವುಳ್ಳವರು ನನ್ನೊಡಗೂಡಿ ಬರಬಹುದು.''

ಸುಮುಖಿಯ ಮಾತನ್ನು ಕೇಳಿ, ಕುಲಾಲವಧುಗಳು ಬಿದ್ದುಬಿದ್ದು ನಗುತ್ತ-ಮೋರೆಯನ್ನು ಕೊಂಕಿಸಿ, ಕೈಗಳನ್ನು ಮೇಲಕ್ಕೆತ್ತಿ ತಿರುಗಿಸಿ-ಪರಿಹಾಸದಿಂದ ಹೀಗೆ ಹೇಳಿದರು—'' ಭಲೆ! ಭಲೆ!! ಹುಚ್ಚುಹುಡುಗಿ! ಬಲು ಚೆನ್ನಾಗಿಯೇ ಹೇಳಿದೆ-ಮೆಚ್ಚಬೇಕು. ಇಷ್ಟು ಒಳ್ಳೆಯ ಉಪಾಯವನ್ನು ತೋರಿದೆಯಾದುದರಿಂದ-ಎಲ್ಲರೂ ನಿನ್ನನ್ನು ಮೆಚ್ಚಲೇ ಬೇಕು. ಆಹಾ! ಅಲ್ಲವೇನಮ್ಮ? ತಡೆಯೇನು! ಬಂದೇವು, ನಿನ್ನೊಡನೆ ಬಂದರೆ, ಯಮರಾಯನ ಬಳಿಯನ್ನು ಸುಲಭವಾಗಿಯೇ ಸೇರಬಹುದು. ನೀನು ಸಾಯುವುದಲ್ಲದೆ, ನಮ್ಮನ್ನೂ ಸಾಯಿಸಲು ಕರೆಯುತ್ತಿರುವೆಯಲ್ಲವೆ? ಆಗಲಿ ತಡೆಯೇನು. — ''

ಸುಮುಖಿಯು, ಅವರ ಅಪಹಾಸ್ಯಕ್ಕೆ ಖತಿಗೊಳ್ಳದೆ, ಶಾಂತಭಾವನೆಯಿಂದಲೇ ತಲೆದೂಗಿ, ಮರುಮಾತಿಲ್ಲದೆ, ವಾಹಿನಿಯ ಬಳಿಗೆ ಬಂದು, ಭಯ, ಭಕ್ತಿ, ಗೌರವಗಳಿಂದ '' ತಾಯೇ! ಸೌಭಾಗ್ಯದಾಯೇ! ಭಾಗೀರಥಿಯೇ! ನಿನಗಿದೊ ಮರೆಹೊಕ್ಕಿರುವೆನು. ಪಾರುಮಾಡಿ ಕಾಪಾಡುವ ಭಾರವು ನಿನ್ನನ್ನೇ ಸೇರಿರುವುದು.'' ಹೀಗೆ ಪ್ರಾರ್ಥಿಸಿ, ಜಲವನ್ನು ಕಣ್ಣೊಗೊತ್ತಿಕೊಂಡು, ಮನದಲ್ಲಿ ಗುರುಚರಣಕ್ಕೆ ವಂದಿಸಿ, ಪತಿಯನ್ನು ಸ್ಮರಿಸಿ, ಪರಮಾತ್ಮನನ್ನು ಭಜಿಸುತ್ತಾ, ಒಂದೇ ಮನದಿಂದ ಪ್ರವಾಹದಲ್ಲಿಳಿದುಬಿಟ್ಟಳು. ಹೀಗೆ ಇವಳು ಹಿಂದು ಮುಂದು ನೋಡದೆ, ನೀರಿನಲ್ಲಿ ಧುಮ್ಮಿಕ್ಕಿದೊಡನೆ,—

||ಆರ್ಯಾ|| ನಾರಿಯಧೈರ್ಯಕೆ ಮೆಚ್ಚುತೆ | ದಾರಿಯಬಿಟ್ಟಳು ಜಾನ್ಹವಿಯಾಕ್ಷಣದೋಳ್ || ತೋರಿತು ಸೇತುವೆಯಂದದಿ | ವಾರಿಯಮಧ್ಯದಿ ನೆಲವಮಮಾ ನೋಡಲ್ || ನಾರಿಯರೀಕ್ಷಿಸುತವಳಾ | ಪಾರಮಹಿಮೆಗೆ ಬೆರಗಾಗುತೆಮನದಲ್ಲಿ || ಘೋರೆನೆ ಹಿಂಬಾಲಿಸಿಕೆಲ | ನಾರಿಯರೈತಂದರು ಸಡಗರದಲ್ಲಿ || ಪರಮ ಪತಿವ್ರತೆಯವರೊಡ | ವೆರೆಸುತೆನಡೆತಂದಳು ತಡಿಗಾಕ್ಷಣವೇ || ಎರಡೊಂದಾಯಿತು ಮತ್ತಾತರಂಗಿಣಿಯದೇನೊರೆವೆನು ಸೋಜಿಗವೇ.||

(ವಚನ)

ಹೀಗೆ ನದಿಯಮಧ್ಯದಲ್ಲಿ ಸೇತುವೆಯಂತೆ ನೆಲವು ದಾರಿಯನ್ನು ತೋರಿ, ಸುಮುಖಿಯು ಸಖಿಯರೊಡನೆ ತೀರವನ್ನು ಸೇರಿದ ಕೂಡಲೆ ಮತ್ತೆ ವಾಹಿನಿಯೊಂದಾಗಿ ಪ್ರವಹಿಸುತ್ತಿರಲು, ಸುಮುಖಿಯು ತನ್ನನ್ನೇ ಅನುಸರಿಸಿ ಬಂದವರೊಡನೆ ನಗುನಗುತ್ತ ಮನೆಗೆ ನಡೆತಂದು, ತನ್ನದಾರಿಯನ್ನೇ ಇದಿರುನೋಡುತ್ತ ಕುಳಿತಿದ್ದ ಪತಿಗೆ, ನಡೆದ ವಿದ್ಯಮಾನವೆಲ್ಲವನ್ನೂ ಹೇಳಿ, ನಿತ್ಯನೈಮಿತ್ತಿಕವೃತ್ತಿಯಲ್ಲಿ ನಿರತೆಯಾದಳು. ಇತ್ತ ಇವಳೊಡನೆಯೇ ನದಿಯನ್ನು ದಾಟಿಬಂದ ಶರುಣಿಯರು ಪರಮಾಶ್ಚರ್ಯದಿಂದ ಓಡಿಬಂದು, ತಮ್ಮತಮ್ಮರಸರನ್ನೂ ಜತೆಗೊಂಡು, ಹಿರಿಕುಂಬಾರ (ಕುಂಬಾರ ಹೆಗ್ಗಡೆ) ನ ಬಳಿಯನ್ನುಸೇರಿ, ನಡೆದುದೆಲ್ಲವನ್ನೂ ವಿವರಿಸಲು, ಹಿರಿಕುಂಬಾರನು ಕೌತುಕಗೊಂಡು “ ಸುಮುಖಿಯು ಅಷ್ಟರ ತಪಸ್ವಿನಿಯಾಗಿರುವಳೆ ” ಎಂದು ಶಂಕಿಸಿ, ಪರೀಕ್ಷಿಸುವುದಕ್ಕೆಂದು, ತನ್ನ ಸೇವಕರನ್ನು ಕರೆದು—‘ಅಯ್ಯ ಸೇವಕರೇ, ನೀವೀರಾತ್ರಿಯಲ್ಲಿಯೇ ಹೋಗಿ, ಸುಮುಖಿಯು ತನ್ನ ಗಂಡನೊಡನೆ ಸುಖನಿದ್ರೆಯಲ್ಲಿರುವವೇಳೆಯನ್ನು ನೋಡಿ, ಅವಳಮನೆಗೆ ಬೆಂಕಿಯನ್ನು ಹತ್ತಿಸಿ, ಜಳಿಯಲ್ಲಿಯೇ ಕಾವ

ಲಿದ್ದು, ನಡೆಯುವ ವಿದ್ಯಮಾನಗಳೇನೆಂಬುದನ್ನು ಚನ್ನಾಗಿ ತಿಳಿದು ಬಂದು, ನನಗೆಹೇಳಬೇಕು ' ಎಂದು ಕಟ್ಟುಮಾಡಿ ಕಳುಹಿದನು.

ಹೀಗೆ ಹೆಗ್ಗಡೆಯಿಂದ ಪ್ರೇರಿತರಾದ ಸೇವಕರು ಬಂದು, ನಟ್ಟಿರುಳಲ್ಲಿ ಸುಮುಖಿಯು ಮಲಗಿದ್ದಮನೆಗೆ ಬೆಂಕಿಯನ್ನು ಹತ್ತಿಸಿ, ತಾವು ಹತ್ತಿರದಲ್ಲಿಯೇ ಎಚ್ಚರದಿಂದ ಹೊಂಚಿ ನೋಡುತ್ತ ನಿಂತಿದ್ದರು. ಆಗ ಏನಾಯಿತೆಂದರೆ.—

ರಾಗ|| ಕಡುಕು|| (ರಂಜಿಸಿದಳುನಾರಿ)

ಆವರಿಸಿತುಆಗ | ದವಾನಲಬೇಗ ||ಪ|| ಚಿಟಚಿಟಚಿಟಿರೆಂಬುವ ಶಬ್ದದೊಳು| ಫಟಪಟಪಟರೆಂಬಾರಭಸನೊಳು | ಧಗಧಗ್ಗೆಂದುರಿವಾಜ್ವಾಲೆಯೊಳು | ಭುಗ್‌ಭುಗ್ ಭುಗಿಲೆಂಬಾರ್ಭಟವೇಳಲ || ನಿಗಿನಿಗಿಸುವ ಕಿಡಿಗಳನುಗುಳುತ್ತಿರೆ| ನಗೆನೋಟವಿದೆನ್ನುತರಾಜಚರರು ||೧|| ಜ್ವಲನಾರ್ಭಟಕೇಳುತಲೆಚ್ಚತ್ತು—ಹಲುಬುತೆ ಪರಿಪರಿಯಿಂವ್ಯೆಮರೆತು | ಲಲನೆಯನೆಬ್ಬಿಸಿ ಪೇಳಿದನಿಂತು | ಎಲೆಸಖಿನೋಡಿನ್ನುಳಿವುದನೆಂತು || ಬಳಸಿಹುದಕಟಾ ಜ್ವಾಲೆಯಿದೆಮ್ಮನು | ಉಳಿವೆಮಗುಂಟೇಸಖಿನೋಡಿನ್ನು || ಆವರಿಸಿತು ಆಗ ||೨||

(ವಚನ)

ಹೀಗೆ ಮಂದಪ್ರಜ್ಞನು ಮಲಗಿದ್ದಸುಮುಖಿಯನ್ನು ಎಚ್ಚರಿಸಿ, ತೋರಿಸಿ, ಚೀರುತ್ತಿರಲು, ಸುಮುಖಿಯು ಪತಿಯ ಕೈಹಿಡಿದು, ಮಂದಹಾಸದಿಂದ ಹೇಳುವಳು.

|| ಕಂದ || ಮರುಗುವಿರೇತಕೆರಮಣಾ | ಮರಗೂಳನರೆಸಿಮಿಷದೊಳೆ ನಂದುವನಿಜದಿಂ || ಮುರವೈರಿಕಾಯ್ವನೆಮ್ಮಂ | ಸುರಿವುದಿದೆ ನೋಡಿ ಘನವರ್ಷವಾತನೊಲವಿಂ || ಹಲುಬಿದುಸಲ್ಲದು ರಮಣಾ | ಹಲಧರ

ನನುಜನ ವರದಿಂದನಲಂಗಪ್ಪೇ || ಫಲಮಂತೀಪರಿಮುದದಿಂ | ಸಲೆನೋಟವಿದೆಂದೆಣಿಸಿರಿ ಬಿಡನಾಶೌರಿ ||

(ವಚನ)

ಪವಿತ್ರಾಂತಃಕರಣೆಯಾದ ಸುಮುಖಿಯು ಹೀಗೆ ಹೇಳಿ, ಮನದಲ್ಲಿ, ನಿಜಗುರುಸ್ಮರಣಪೂರ್ವಕವಾಗಿ ಪರಮಾತ್ಮನನ್ನು ಭಜಿಸಲಾರಂಭಿಸಿದಳು. ಅಷ್ಟುಮಾತ್ರಕ್ಕೆ ಪರಮಾತ್ಮನು ಸುಪ್ರೀತನಾದನೆಂದಬಳಿಕ ಕೇಳಬೇಕೆ—ಮುಂದಿನವಿವರವನ್ನು! ಒಮ್ಮೆಯೆ ಜಡಿವಳೆಯು ಸುರಿದು, ಸುತ್ತುವರಿದಿದ್ದ ಉರಿಯನ್ನಾರಿಸಿ, ಅರೆಗಳಿಗೆಯಲ್ಲಿಯೇ ಶಾಂತಿಯನ್ನುಂಟುಮಾಡಿ—ಸುಮ್ಮನಾಯಿತು. ಇದೆಲ್ಲವನ್ನೂ ಸತಿಯೊಡನೆ ಸಾವಧಾನದಿಂದ ನೋಡುತ್ತಿದ್ದ ಮಂದಪ್ರಜ್ಞನಂತೂ, ಆನಂದಪರವಶನಾಗಿ ಭಗವಂತನ ಮಹಿಮೆಯನ್ನು ಬಗೆಬಗೆಯಾಗಿ ವರ್ಣಿಸುತ್ತ—ಸುಖವಾಗಿಮಲಗಿದನು. ಆಬಳಿಕ, ಹೊಂಚಿನೋಡುತ್ತಿದ್ದ ಹೆಗ್ಗಡೆಯ ಆಳುಗಳು ಓಡಿಹೋಗಿ, ನಡೆದ ಯಾವದ್ವೃತ್ತಾಂತವನ್ನೂ ವಿವರಿಸಲು, ಅದನ್ನು ಕೇಳಿ ಹೆಗ್ಗಡಿಯು, ವಿಸ್ಮಯಕೌತುಕಗಳಿಂದ ಮರುದಿನದ ಉದಯಕ್ಕೆ ಮೊದಲೇ ತನ್ನವರೆಲ್ಲರನ್ನೂ ಜತೆಗೊಂಡು ಬಂದು, ಸುಮುಖಿಯ ಮನೆಬಾಗಿಲಲ್ಲಿ ಕಾದಿದ್ದನು. ಸುಮುಖಿಯು, ತನ್ನ ನಿತ್ಯಸಿಯಮದಂತೆ ಅರುಣೋದಯದಲ್ಲೆದ್ದು ಬಂದು, ಸಪರಿವಾರನಾಗಿ ಬಂದು ಕಾದಿದ್ದ ಹೆಗ್ಗಡೆಯನ್ನು ನೋಡಿ, ವಿನಯ ಗೌರವಗಳಿಂದ ನಮಸ್ಕರಿಸಿ–“ತಾತಾ! ಇದೇ ನಾಶ್ಚರ್ಯ! ಸೂರ್ಯೋದಯಕ್ಕೆ ಮೊದಲೇ, ಸೂಚನೆಯನ್ನು ಕೊಡದೆಯೇ—ಸಪರಿವಾರರಾಗಿ ಬಂದಿರುವಿರಿ?” ಎಂದುಕೇಳಿದಳು. ಅದಕ್ಕಾ ಹೆಗ್ಗಡೆಯು ಪುತ್ರವಾತ್ಸಲ್ಯದಿಂದ ಸುಮುಖಿಯಮುಡಿಯನ್ನು ಸವರಿ, “ಮಗಳೇ! ನಿನ್ನ ಅದ್ಭುತಪ್ರಭಾವಕ್ಕೆ ಜಗತ್ತೇ ಮೋಹ

ಗೊಳ್ಳುತ್ತಿರುವಲ್ಲಿ ಸಪರಿವಾರನಾಗಿ ನಾನು ಬಂದುದು, ಆಶ್ಚರ್ಯವೇ? ತಾಯಿ! ನಿನ್ನ ಅಂತಶ್ಶುದ್ಧಿಯನ್ನು ಇಷ್ಟು—ಹೀಗೆಂದು ತಿಳಿಯಲಾರದೆ, ಹುಚ್ಚಿಯೆಂದೂ, ಮೂಗಿಯೆಂದೂ, ಕಿವುಡಿಯೆಂದೂ ಹಲವು ಬಗೆಗಳಿಂದ ಹಳಿದಾಡುತ್ತಿದ್ದೆವು. ಈಗ ನಿನ್ನೆಯೂ, ಮೊನ್ನೆಯೂ—ನೀನು ನಡೆಯಿಸಿ ತೋರಿಸಿದ ಅದ್ಭುತ ವಿದ್ಯಮಾನಗಳಿಂದ ನಾನು ಅತ್ಯಾನಂದದಿಂದ ನಿನ್ನನ್ನೇ ಕಣ್ಣಾರೆ ನೋಡಿಹೋಗಲು ಬಂದೆನು. ಇನ್ನು ಮುಂದೆ ನೀನು, ಕುಲಾಚಾರವೆಂದು ಯಾವುದೇ ಬಗೆಯ ಕಷ್ಟದ ಕೆಲಸಗಳಿಗೂ ಕೈಹಾಕದೆ, ನಮ್ಮೆಲ್ಲರಿಗೂ ಅಧಿದೇವತೆಯಾಗಿದ್ದು-ಅನುಗ್ರಹಿಸುತ್ತಿದ್ದರೆಸಾಕು. ನಾವು ದಿನವೂ ಸರದಿಯಮೇಲೆ, ಒಬ್ಬೊಬ್ಬರಂತೆ ನಿನ್ನ ಪತಿಯ ಸೇನೆಗೆ ಸಿದ್ಧರಾಗಿದ್ದು, ಎಲ್ಲವನ್ನೂ ಒದಗಿಸಿಕೊಡುತ್ತ.ಬರುವೆವು. ತಿರಸ್ಕರಿಸ ಬಾರದೆಂಬುದೇ ನಮ್ಮ ಕೋರಿಕೆ." ಹೆಗ್ಗಡೆಯು ಹೀಗೆ ಕೇಳಿಕೊಳ್ಳಲು, ಸುಮುಖಿಯು ವಿನಯ ಗಂಭೀರಸ್ವರದಿಂದ—ಹೇಳುವಳು.—

ರಾಗ || ಗೀತೆ

ತಾತಪಾಲಿಸೈ—ಮಾತನಾಲಿಸೈ | ಜಾತೆಯಲ್ಲಿಸಂ—ಪ್ರೀತಿ ತೋರಿಸೈ || ಕುಲದಪದ್ಧತಿ—ಯುಳಿವುದೊಳ್ಳಿತೆ | ಚಲವಮಾಳ್ಪರಿ—ಗಳವೆಸಂಪದ || ಪಾಣಿಪಾದಗಳ್—ಪ್ರಾಣಿಕೋಟಿಯೋಳ್ | ಮಾನವರಿಗೆಯೇ—ಮಾನನಿಧಿಯೆಕೇಳ್ || ಕರಣವಡೆದುಸ—ತ್ಕರ್ಮವೆಸಗದೆ | ಬೆರೆದುವಿಷಯದೆ—ಮೆರೆಯಲಪ್ಪುದೆ || ಹಿರಿಯರೇನಿಮ್ಮ ಹರಕೆಯೊಂದಿರೆ| ದೊರೆವುದೆಮಗೆಸ—ರ್ವಾರ್ಥಸಿದ್ಧಿಯು || ಶೇಷಗಿರೀಶನಾ—ದಾಸರಾವುಕೇಳ್ | ಓಸರಿಸಿದೆನೆಂದುಬೇಸರಿಸಲಾಗದು ||

ಹೀಗೆ ಪ್ರಾರ್ಥಿಸಿ, ಸಂತೈಸಿ, ಕಳುಹಿ, ಆ ಬಳಿಕ, ತನ್ನ ಧಿನ ಗಟ್ಟಳೆ ಕೆಲಸಗಳನ್ನು ಮಾಡಲುತ್ಸುಕಳಾದಳು. ಹೀಗೆಯೇ ನಡೆಯುತ್ತಿ

ರಲು, ಈ ದೇವಿಯ ಅದ್ಭುತ ಪ್ರಭಾವವನ್ನು ಕುರಿತು ಸ್ತುತಿಗಳು ಕ್ರಮ ಕ್ರಮವಾಗಿ ಹೊರಹೊರಟು, ದ್ಯುತಿಮಂತರಾಯನ ಕಿವಿಯುವರೆಗೂ ಮುಟ್ಟಲು, ಧರ್ಮಾತ್ಮನಾದ ರಾಯನು, ಸುಮುಖೀದೇವಿಯನ್ನು ಪರೀಕ್ಷಿಸಬೇಕೆಂದು ಸಂಕಲ್ಪಿಸಿ, ಒಂದು ದಿನ ಇವಳು ರಾಜಮಾರ್ಗವಾಗಿ ಭಾಂಡಗಳನ್ನು ಹೊತ್ತುಕೊಂಡು ಮಾರಲಿಕ್ಕೆ ಬರುತ್ತಿದ್ದ ವೇಳೆಯನ್ನೇ ನೋಡಿ ಬಂದು ತನ್ನ ಪತ್ನಿಯಾದ ಶುಭಾಂಗಿಯನ್ನು ಕುರಿತು—'ದೇವಿ! ಇದೋ ಇಲ್ಲಿ ಬರುತ್ತಿರುವ ಈ ಸಾಧ್ವಿಯನ್ನು ನೋಡು, ಇವಳ ತಪಃ ಪ್ರಭಾವವು ಅತ್ಯದ್ಭುತವೆಂದು ಬಹು ಜನರಿಂದ ಕೇಳಿರುವೆನು. ಅದನ್ನು ಪರೀಕ್ಷಿಸಬೇಕೆಂದು ಇಂದು ಸಂಕಲ್ಪಿಸಿರುವೆನಾದುದರಿಂದ, ಇವಳನ್ನು ನಿನ್ನ ಬಳಿಗೆ ಕರೆಯಿಸಿ, ಕಾರಣಾಂತರಗಳನ್ನು ಸೂಚಿಸುತ್ತ ಅತ್ತಿತ್ತ ಬಿಡದೆ ತಡೆದು ನಿಲ್ಲಿಸಿಕೊಂಡಿರು; ಮುಂದೆ ನೋಡುವೆನು' ಎಂದಿಂತು, ಕಟ್ಟು ಮಾಡಿ, ತಾನು ಬಂದು ಉಪ್ಪರಿಗೆಯಲ್ಲಿ, ಮಂತ್ರಿಯೊಡನೆ ಕಾಲನಿರ್ಣಯ ಚಕ್ರವನ್ನು ಹಿಡಿದು ಅದನ್ನೇ ನೋಡುತ್ತ ಕುಳಿತಿದ್ದನು.

ಪತ್ಯಾಜ್ಞಾಪ್ರಕಾರ ಶುಭಾಂಗಿಯು, ಸುಮುಖಿಯನ್ನು ಬಳಿಗೆ ಕರೆಯಿಸಿಕೊಂಡು, ಅವಳ ತಲೆಯಮೇಲಿದ್ದ ಪುರುಷ ಪ್ರಮಾಣದಷ್ಟರ ಭಾಂಡಗಳನ್ನು ತೆಗೆಯಿಸಿ, ಅವಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅವಳ ರೂಪಲಾವಣ್ಯ ಗಾಂಭೀರ್ಯಾದಿಗಳಿಗೆ ಬೆರಗಾಗಿ ಹೀಗೆಂದು ಕೇಳುವಳು.

||ರಾಗ|| ಶಂಕರಾಭರಣ|| (ನೀನ್ಯಾರೋವಾನ)

ಆರಮ್ಮ—ನಾರೀಮಣಿಯೆ | ಸಾರಸಾಕ್ಷಿಯೆ ||ಪ||
ಆರು ನೀನೆಲೆ ತರುಣಿ | ಸಾರಿ ಪೇಳೆಲೆ ಸುಗುಣಿ || ಧಾರುಣಿಯೊಳಗುಳ್ಳವರೊಳು ನೀ—ನಾರ ರಮಣೀಮಣಿ || ಯಾರಮ್ಮ||ಅನು||
ಕೋಮಲಾಂಗಿಯೆ ನಿನ್ನ—ಕೈವಿಡಿದು—ಪ್ರೇಮಕೆ ಪಾತ್ರನಾದವನು|

ಪೇಳಾವನು| ನಾಮವದೇನುನಿಮಗಿನ್ನು--ತಿಳುಹಿದನು|| ಭಾಮಾಮಣಿಯೆ ನಿನ್ನ—ತಾಯಿತಂದೆಗಳಾರು | ಈಮಹಿಯೊಳಗೆಲ್ಲಿಪೇರಿನೀಂಮಾಜದೆಸೇಳುವುದೆನ್ನೊಳು| ಯಾರಮ್ಮ ||೧|| ಸರಸೀರುಹ ನೇತ್ರೆನಿನ್ನಯ—ಶಿರದ ಮೇಲೆ—ಪುರುಷ ಪ್ರಮಾಣವಾಗಿರುವ | ಭಾಂಡಗಳ—ಪರಿಯನೀಕ್ಷಿಸಲೆನ್ನಯ--ಮಾನಸವಿದು||ಪರಮಾಶ್ಚರ್ಯದಿಂದ--ಮರುಳಾಗಿ ಪೋಗುತಿದೆ| ಧರೆಯೊಳು ನಿನ್ನಂದದ—ತರುಣಿಯರಾರಿರ್ಪರುಸಿರ್ ||ಯಾರಮ್ಮ||೨||

(ವಚನ)

ಹೀಗೆ ರಾಜ್ಞಿಯಿಂದ ಕೇಳಲ್ಪಟ್ಟ ಸುಮುಖಿಯು, ವಿನಯ ಗಾಂಭೀರ್ಯದಿಂದ ಕೈಮುಗಿದು ಹೇಳುವಳು— "ಮಹಾರಾಜ್ಞೀ, ನಾನೊಬ್ಬ ಕುಲಾಲವಧು, ಇಲ್ಲಿಯ ಪ್ರಸಿದ್ಧನಾದ 'ಶುದ್ಧಸಾಧುವೆಂಬ' ಕುಂಬಾರನ ಮಗಳು, ನನ್ನ ಸ್ವಾಮಿಯನ್ನು ಮಂದ ಪ್ರಜ್ಞನೆಂದು ಕರೆಯುವರು. ನನ್ನ ತಾಯ್ತಂದೆಗಳು ನಮ್ಮನ್ನು ಬಿಟ್ಟು, ಶ್ರೀಹರಿಪಾದಾರವಿಂದದಲ್ಲಿ ಸೇರಿಹೋದರು. ನಾವು ಸತಿ ಪತಿಗಳೀರ್ವರೇ ಇರುವೆವಾದುದರಿಂದ, ನಾನು ಹೊತ್ತು ತಂದಿತ್ತ ಮಣ್ಣಿನಲ್ಲಿ ನನ್ನ ಸ್ವಾಮಿಯು ಭಾಂಡಗಳನ್ನು ಮಾಡಿಡುತ್ತಲೂ, ಅವುಗಳನ್ನು ನಾನು ತಂದು ಮಾರಿ ಬಂದುದರಿಂದ ಪಾಕಸಾಮಗ್ರಿಗಳನ್ನು ಕೊಂಡುಹೋಗಿ, ನಿತ್ಯ ಸೇವೆಯನ್ನು ಮಾಡುತ್ತಲೂ ಇರುವೆವು. ತಾಯೇ! ನನ್ನ ಸ್ವಾಮಿಯ ಭೋಜನಕಾಲವು ಸಮೀಪಿಸ ತ್ತಿದೆ. ತಡೆಮಾಡದೆ ದಯೆಯಿಟ್ಟು ನನಗೆ ರೊಕ್ಕವನ್ನಿತ್ತು ಬೀಳ್ಕೊಡಿರಿ?" ಈ ಬಗೆಯ ಸುಮುಖಿಯ ಪ್ರಾರ್ಥನೆಯನ್ನು ಕೇಳಿಯೂ, ಅವಳ ವ್ರತ ಪರೀಕ್ಷೆಯಲ್ಲಿದ್ದ ರಾಣಿಯು, ನಸುನಗುತ್ತ "ಸಾಧ್ವೀಮಣೀ—ಸುಮುಖಿ! ಸ್ವಲ್ಪ ತಾಳು; ಒಂದೇ ಒಂದು ಗಳಿಗೆ ತಾಳು. ನಿನ್ನ ಲೋಕೋತ್ತರ ರೂಪ ಲಾವಣ್ಯಾತಿಶಯಗಳನ್ನು

ನೋಡಿ, ನನ್ನ ಮನಸ್ಸು ಅಧಿಕ ಮೋಹಗೊಂಡಿರುವುದು. ಕಣ್ದಣಿವಂತೆ, ಮನದಣಿವಂತೆ, ನಿನ್ನ ಸರ್ವಾಂಗ ಶೋಭಾರಾಶಿಯನ್ನೂ ನೋಡಿ, ನನ್ನ ಜನ್ಮ ಸಾಫಲ್ಯ ಮಾಡಿಕೊಂಡ ಬಳಿಕ, ನಿನ್ನನ್ನು ಬೀಳ್ಕೊಡುವೆನು, ಅವರೆಗೆ ಆತುರಗೊಳ್ಳದೆ ಸುಮ್ಮನಿರು.'' ಎಂದು ಹೇಳುಹೇಳುತ್ತ ಕೈಹಿಡಿದೆಳೆದು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅವಳ ಪ್ರಾರ್ಥನೆಗೆ ಕಿವಿಗೊಡದೆ, ಬಲತ್ಕಾರದಿಂದ ತಾನು ತೊಟ್ಟಿದ್ದ ತೊಡವುಗಳನ್ನು ಒಂದೊಂದನ್ನಾಗಿ ತೆಗೆದು ಸುಮುಖಿಗೆ ತೊಡಿಸುತ್ತ, ಒಂದೊಂದನ್ನೂ ವರ್ಣಿಸುತ್ತ ಕುಳಿತಳು. ಸುಮುಖಿಯು, ಇಂತಹ ಬಾಹ್ಯಾಡಂಬರವನ್ನು ದ್ವೇಷಿಸುತ್ತಿರುವವಳಾದರೂ, ರಾಜಮಹಿಷಿಯ ನಿರ್ಬಂಧಕ್ಕೊಳಪಟ್ಟು ಮತ್ತೇನನ್ನೂ ಮಾಡಲಾರದೆ, ವ್ರತಭಂಗ ಭೀತಿಯಿಂದ ಶಕ್ತಿಶೂನ್ಯಳಾಗಿ ಕುಳಿತಳು

ರಾಜಮಹಿಷಿಯು ಅಷ್ಟಕ್ಕೆ ಬಿಡದೆ, ಒಮ್ಮೆ ಸಿಂಗರಿಸಿನೋಡಿ, 'ಇದು ಸರಿಹೋಗಲಿಲ್ಲ; ಇಲ್ಲಿಗೆ ಇದು ಅಷ್ಟಾಗಿ ಒಪ್ಪುತ್ತಿಲ್ಲ,' ಹೀಗೆ-ಇಲ್ಲದೊಂದು ನೆವಗಳನ್ನು ಮುಂದಿಟ್ಟು ಮತ್ತೆಮತ್ತೆಯೂ ತೆಗೆತೆಗೆದು ತೊಡಿಸುತ್ತ ಕಾಲಹರಣಕ್ಕೆ ಬೇಕಾದ ವ್ಯಾಜಗಳನ್ನು ಮುಂದಿಡುತ್ತಿದ್ದಳು ಪಾಪ! ಸುಮುಖೀದೇವಿಯು ಮುಂದೇನುಮಾಡಬೇಕೆಂಬುದನ್ನು ತಿಳಿಯದೆ, ಖತಿಗೊಂಡು, ಮನದಲ್ಲಿಯೇ ಮರುಮರುಗುತ್ತ ನಿಜಗುರುವನ್ನು ಸ್ಮರಿಸಿ, ಪತಿಯನ್ನು ನೆನೆನೆನೆದು ವಂದನಾಪ್ರಿಯನೂ, ವರದಾಭಯಪ್ರದನೂ ಆದ ಸಾಕ್ಷಾತ್‌ಭಗವಾನ್ ಭಾಸ್ಕರನನ್ನು ಮನದಲ್ಲಿಯೇ ಹೀಗೆ ಪ್ರಾರ್ಥಿಸಿಕೊಂಡಳು.—

ರಾಗಾ (ಧರಣಿಪಾಲಕರೆಲ್ಲರು—ಶಿರದೂ)

ಬೇಡುವೆನ್ನೈ ನಿನ್ನನು | ನೀಡೈವರವನ್ನು ||ಪ||

ಲೋಕಲೋಚನನೆನಿಪ—ದಿವಾಕನಿನ್ನ ಪಾದದೋ | ಳೇಕಚಿತ್ತದಲ್ಲಿ—

ನಾಕೇಳಿಕೊಂಬೆನಿಲ್ಲಿ || ಬೇಡುವೆ ||೧|| ಭೂಮಿಪನರಸಿಯು | ತಾಮಸ ಮಾಡುತಿಹಳು| ನೇಮವನರಿಯಳು | ಏಗ್ಯೆಯ್ವುದೀಗಳು ||ಬೇಡುವೆ||೨|| ಕ್ಷೇಮಂಕರದಾವೋದರ | ಪ್ರೇಮಂಮಿಗೆ ತಾಳ್ದೀಕ್ಷಿಸು || ನೇಮಕೆ ಕುಂದಿಲ್ಲದೆ—ಧಾಮನಿಧೇನಿಂತಿಲ್ಲಿಯೆ || ಬೇಡುವೆ ||೩|| ಕರವಿಡಿಯೆನ್ನ ಶೌರೆ | ವರಶೇಷಗಿರಿದೊರೆ || ಕರುಣಾಕರನೀನೆಂದು | ಮರೆಹೊಕ್ಕೆ ದೀನ ಬಂಧು ||೪||

ಸೂರ್ಯನನ್ನು ಪ್ರಾರ್ಥಿಸಿದ ಬಳಿಕ ಮತ್ತೆಯೂ ರಾಣಿಯನ್ನು ಕುರಿತು ಕೈ ನೀಡಿ ಕೇಳಿಕೊಳ್ಳುವಳು.—

ರಾಗಾ (ಕುಡುಮಿಯೆ ಉಡುಗರತಿ)

ರೊಕ್ಕವಕೊಡಿಸಮ್ಮಾ—ಭಾಂಡಗಳ | ರೊಕ್ಕವ ಕೊಡಿಸಮ್ಮ || ಪ || ರೊಕ್ಕವಕೊಡುಮೇಲಕೆ ಅರ್ಕನಿದೆಬಂದನು | ಆಕ್ಕ್ಯಾರವರದನ ಪೂಜೆಗೆ ತಳುವದೆ|| ರೊಕ್ಕವ||ಅನು|| ಹತ್ತುಗಂಟೆಗೆಸರಿಯಾಗಿ—ಎನ್ನ—ಭರ್ತಾರನ ಮನಕಿಂಪಾಗಿ || ಉತ್ತಮ ಶಾಖಪಾಕಾದಿಗಳಿಂದಲಿ || ಚಿತ್ತವುನಲಿವೊಲ್ ಸೇವಿಪೆಪೋಗಿ || ರೊಕ್ಕವ || ೧ || ಮಣ್ಣು ಹೊರುತಿರುವೆನಗೆ | ಬಗೆಬಗೆ| ಮಣಿಮಯತೊಡವಿನಬೆಡಗೆ || ಕಣ್ಮನತಣಿವೊಲ್—ತಣ್ಪಿನ ನೋಟದೆ | ಮನ್ನಿಸಿಬೀಳ್ಕೊಡು—ಮಾನಿನಿಮಣಿನೀಂ || ೨ ||

(ವಚನ)

ಹೀಗೆ ಸುಮುಖಿಯು ದೈನ್ಯದಿಂದ ಪ್ರಾರ್ಥಿಸಿಯೂ, ಪತಿಪ್ರೇರಣೆಯಂತೆ ಶುಭಾಂಗಿಯು ರೊಕ್ಕವನ್ನೂ ಕೊಡದೆ, ಕಳುಹುವ ಮಾತನ್ನೂ ಎತ್ತದೆ, ನಗುನಗುತ್ತ ವಿನೋದ ಪ್ರಸಂಗದಲ್ಲಿಯೇ ಗಮಕಿಯಾಗಿ ಕುಳಿತಿರಲು, ಸುಮುಖಿಯು ಮನನೊಂದು, ರಾಣಿಯನ್ನು ಕುರಿತು ನ್ಯಾಯ ನಿಷ್ಠುರದಿಂದ ಮತ್ತೆ ಹೇಳುವಳು—

||ಕಂದ|| ತಾಮಸಮೇನಿದುರಾಜ್ಞೀ | ಭೂಮಿಯನಾಳ್ವರಸರಿಗಿದು ತರಮೇಂ ರಮಣೀ || ನೇಮಕೆ ಕುಂದಂ ತಾರದೆ | ಪ್ರೇಮದಿ ಕಳು ಹೆನ್ನ ತಾಯೆ ಕರುಣಾವಲಯೆ ||೧|| ತಿರುಪರ ಕರೆತಂದೀತೆರ | ನರರೇ, ಸಿಂಗರಿಪುದಿ ದೆತ್ತಣಚಿತ್ರಂ, ಭಾ || ಸುರವದನೆ ಕೃಪಾಪಾಂಗದೆ | ಪರಿ ಕಿಸಿ ಕೊಡುಸಮ್ಮತಿಯಿದೊ ಬೇಡುವೆ ಸುಮತೀ ||೨||

(ವಚನ)

ಸುಮುಖಿಯ ದೈನ್ಯಾಲಾಪವನ್ನು ಕೇಳಿ ರಾಣಿಯು ನಗುತ್ತ- "ಅಮ್ಮ, ಸುಮುಖಿ! ಹೀಗೇಕೆ ಕಳವಳಗೊಳ್ಳುವೆ? ಧೈರ್ಯವನ್ನು ತಳೆ; ಒಂದೆರಡು ಗಳಿಗೆ ಸಮಾಧಾನದಿಂದ ಕುಳ್ಳಿರು, ನಿನ್ನರಸನನ್ನೂ ಇಲ್ಲಿಗೇ ಬರಮಾಡುವೆನೆಂದೂ, ಆವರೆಗೆ ನಿನ್ನನ್ನೂ ಇಲ್ಲಿಯೇ ತಡೆದಿರಿಸಿಕೊಂಡಿರ ಬೇಕೆಂದೂ-- ನಾನು ಮಹಾಪ್ರಭುವಿನ ಆಜ್ಞೆಯಿಂದ ಪ್ರೇರಿಸಲ್ಪಟ್ಟಿರು ತ್ತೇನೆ. ಮಹಾರಾಜನು ಬಂದು ನಿನ್ನನ್ನು ಸನ್ಮಾನಿಸಿ, ಬೀಳ್ಕೊಡು ವುದಕ್ಕೆ ಮೊದಲು, ನಾನೇನನ್ನೂ ಮಾಡಲಾರೆನು, ರಾಯನಿದೋ ಬರು ವವೇಳೆಯಾಯ್ತು, ಸ್ವಲ್ಪ ತಾಳು" ಹೀಗೆ ಹೇಳಿ ರಾಣಿಯು ಸುಮ್ಮ ನಾದಳು. ಸುಮುಖಿಗೆ ಮುಂದೇನುಮಾಡಬೇಕೆಂಬುದೇ ಹೊಳೆಯದೆ, ಮನಸ್ಸು ಚಿಂತಾಪರವಶತೆಯಿಂದ ಸ್ತಬ್ಧವಾಗಲು, ಭಗವಂತನ ಸಂಕಲ್ಪ ಐದ್ದಂತೆ ನಡೆಯಲೆಂದು ದೃಢಪಡಿಸಿಕೊಂಡು, ಕಲ್ಲಿನಂತೆ ಕದಲದೆ, ಕೆಮ್ಮದೆ, ಕುಪಿತೆಯಾಗದೆ ಮೌನದಿಂದ ಕುಳಿತುಬಿಟ್ಟಳು.

"ನಂಬಿದವರ ಬೆಂಬಿಡನಾ ಅಂಬುಜಾಕ್ಷ" ನೆಂದಿರುವದಷ್ಟೆ. ಹಾಗೆಯೇ ನೀನೇಗತಿಯೆಂದು ನಂಬಿ ಕುಳಿತ ಸುಮುಖಿಯ ಮನ ಸ್ಥೈರ್ಯದಿಂದ ಸುಪ್ರೀತನಾದ ಸೂರ್ಯದೇವನು ಏನುಮಾಡಿದನೆಂದರೆ.-

||ಆರ್ಯಾ||

ನಾರಿಯು ಕಟ್ಟಾಣತಿಯಂ | ಮೀರದೆ ನಡಯಿಪೆನೆನುತಾ ದಿನನಾಥಂ | ನೀರೆಯು ಪಾತಿವ್ರತ್ಯದ|ಸಾರವತೋರುವೆನೀರಾಯನಿಗೆನುತಂ||೧|| ನಿಂತೆಡೆ ನಿಂತಿರೆ ಕಮಲಾ | ಕಾಂತಂ ನಭದೊಳ್ ಚಲಿಸದೆ ದಾಸಳನು|| ಸಂತಸ ದಿಂಪರಿಪಾಲಿಪೆ | ನಂತೆನಲಾಂತನು ಚಿಂತೆಯ ನಾರ್ಯಮನು||೨||

(ವಚನ)

ಹೀಗೆ, ಮೂರು ಯಾಮವು ಕಳೆದುಹೋಗುತ್ತಿದ್ದರೂ, ಸತೀ ಮಣೀಸುಮುಖಿಯ ತಪಃ ಪ್ರಭಾವಕ್ಕೆ ಸೋತು, ಅರವಿಂದ ಬಾಂಧವ ನಾದ ಸೂರ್ಯದೇವನು, ಮೊದಲನೆಯ ಯಾಮದಲ್ಲಿಯೇ ಇರುತ್ತಿರುವು ದನ್ನು ಕಾಲನಿರ್ಣಯ ಚಕ್ರವನ್ನು ಹಿಡಿದು ನೋಡುತ್ತ ಕುಳಿತಿದ್ದ ಭೂಪಾಲನು ತಿಳಿದು ಚಕಿತನಾಗಿ, ಭಗವದ್ಭಕ್ತರ ತೇಜಸ್ವಿತೆಯು ಅತ್ಯ ದ್ಭುತವೆಂದು ಭಾವಿಸಿ, ಮಂತ್ರಿಯೊಡನೆ ಭರದಿಂದೋಡಿಬಂದು, ಸುಮುಖಿ ಯಮುಂದೆ ಕೈಜೋಡಿಸಿ ವಿನೀತನಾಗಿ ನಿಂತು, ಹೀಗೆ ಪ್ರಾರ್ಥಿಸುವನು.–

||ರಾಗಾ|| (ಕ್ಷಮಿಸಬೇಕಮ್ಮ)

ಕ್ಷಮಿಸಬೇಕಮ್ಮಾ | ತಪ್ಪುಗಳನ್ನು| ಕ್ಷಮಿಸಬೇಕಮ್ಮಾ ||ಪ|| ಕಮಲಾ ಕಾಂತನು ನಿನಗೊಲಿದಿಹ ನಮ್ಮ|| ಕ್ಷಮಿಸ ||ಅನು|| ಅರಿಯದೆ ನಾನು | ಮಾಡಿದುದನ್ನು |ಗುರುತರವಾದುದನು | ತಪ್ಪುಗಳನ್ನು|| ಪರಮಪಾವನೆ ನೀನು | ಕರುಣಿಸಿ ಕ್ಷಮಿಸಿನ್ನು || ಕ್ಷಮಿಸ ||೧|| ತಾಯೆ ನಿನ್ನನೇಮ | ದಾಯವನರಿಯೆ| ನೋಯಿಸಿದೆನಮ್ಮ ||ವಂದಿಪೆನಿದೊ||ಕಾಯಬೇಕೆನ್ನುತೆ | ಕೈಮುಗಿವೆ ಮತಿಯುತೆ| ಕ್ಷಮಿಸ||೨|| ವರಶೇಷಗಿರಿಯ| ದೊರೆಯಾನಿಜ| ಶರಣಳಾಗಿಹ ನಿನ್ನಯ | .ದರ್ಶನದಿಂದ || ನೆರೆ ಧನ್ಯತೆಯಾಂತೆ || ಸರರೆ ಪತಿವ್ರತೆ || ಕ್ಷಮಿಸ ||೩||

(ವಚನ)

ಹೀಗೆ ಪ್ರಾರ್ಥಿಸಿದ ರಾಯನನ್ನು ಕುರಿತು, ಸುಮುಖಿಯು ಆನಂದಭಾಷ್ಪವನ್ನು ಸುರಿಸುತ್ತ ಗದ್ಗದಸ್ವರದಿಂದ–"ಎಲೈ ಧರ್ಮ

ಪ್ರಭುವೇ ! ನ್ಯಾಯಧರ್ಮಪರಿಪಾಲಕನಾದ ನೀನು, ನಿನ್ನ ಪ್ರಜಾ ಕೋಟಿಯಲ್ಲಿ ಒಬ್ಬಳಾಗಿರುವ ನನ್ನಂತಹ ಅಬಲೆಯಲ್ಲಿ, ಹೀಗೆ ದೈನ್ಯ ವನ್ನು ತೋರಿಸಬಹುದೇ ? ನಿನ್ನ ದಯೆಯಿಂದಲೇ ಈ ರಾಜ್ಯದಲ್ಲಿ ನಾವು ನೆಮ್ಮದಿಯಲ್ಲಿರುವೆವಲ್ಲವೇ ? ಇಂತಹ ತಂದೆಗೆ ಸಮನಾದ ನೀನು ನಮ್ಮನ್ನು ಸೇವಕರಂತೆ ಭಾವಿಸದೆ, ಗೌರವಿಸಬಹುದೇ ? ಕ್ಷಮಿಸಿ ಕಟ್ಟು ಮಾಡಬೇಕು.'' ಎಂದು ಹೇಳಲು ಆದರಿಂದ ಮತ್ತೂ ಸಂತುಷ್ಟನಾದ ರಾಜನು ಮತ್ತೆ ಹೇಳುವನು.

||ರಾಗ|| (ಬೇಡುವರವತಾಯೀ)

ಪಾಲಿಸೀಗನುಡಿಯಂ–ನೀಲಾಳಕೆನೀ–ನಾಲಿಸೆನ್ನನುಡಿಯಂ || ಕೇಳಿಕೊಂಬೆ ಸುಶೀಲೆ ಕಟಾಕ್ಷಿಸು || ಕಾಲವ ಕಳೆಯದೆ | ತಾಳುತಮುದವಂ || ಪಾಲಿಸೀಗ || ಅನು || ಎರೆಯನ ಸಹವಾಗೀ |ಭವನದಿ| ಮೆರೆಯುತ್ತಿರೆ ಸುಖವಾಗಿ || ಪರಿಪರಿವಿಧದೈಸಿರಿ ಸಂಪತ್ತಿಗೆ | ಅರಸಿಯು ನೀ ನಾಗಿರು ಸಂತತ || ಪಾಲಿಸೀಗ ||೧|| ಸಾಕುಮುನ್ನಿನಭವಣಂ | ಕುಲಸತಿ| ಸಾಕು ನಮ್ಮೆಲ್ಲರನು || ವ್ಯಾಕುಲಪಡಿಸದೆ, ನೀ ಕರುಣಿಸುಭರದಿಂ | ಕೋಕಿಲಾರವೆ ಸುಕಲಾಪದೊಳೆಮ್ಮನು || ಪಾಲಿಸೀಗ ||೨||

(ವಚನ)

ಹೀಗೆ ರಾಯನು ಪ್ರಾರ್ಥಿಸಲು, ಸುಮುಖಿಯು ಅದನ್ನು ಮೀರಲಾರದೆ ಸಮ್ಮತಿಸಿದಳು. ಆ ಬಳಿಕ ಏನಾಯಿತೆಂದರೆ—

|| ಕಡುಕು || (ಧನುವೆತ್ತಿಧರಣಿಪರುದು)

ಹರಿಸವ ಪೊಂದಿದನು| ದೊರೆ ದ್ಯುತಿವಂತನು ||ಪ||

ಹರಿಸವ ಪೊಂದಿದ ನಾತನುಮನದಲ್ಲಿ| ಕರೆಯಿಸಿದ ಮಂದಪ್ರಜ್ಞನವ ಹಿಲದಲಿ| ಪುರವನು ಸಿಂಗರಿಸಿದ ನರೆನಿಮಿಷದಲಿ| ಕರಿತುರಗರಥ ಪದಾತಿಗ ಳೊಡವೆರಸುತಲಿ || ಪರಮ ಸಂಭ್ರಮದಿಂದಾ ಸತಿಪತಿಯರ | ಕರಿ ರಾಜನ ಮೇಲೇರಿಸಿ ಮೆರೆಯಿಸಲು|| ಹರಿಸವ ||೧||

ವಂದಿಮಾಗಧರು ಕೈವಾರಿಸುತಿರುತಿರಲೂ| ಮುಂದೆಡೆ ಭಟ್ಟಾರಕರಗ್ಗಳಿಸುತ್ತಿರಲು| ದುಂದುಭಿಗಳು ದಿಕ್ತಟದೊಳು ಮೊಳಗುತ್ತಿರಲು | ಮಂದಿಗಳೊಲಿದೀಕ್ಷಿಸಲಾ ನೃಪಸತಿವೆರಸುತ|| ಸ್ಯಂದನದೊಳಗೈ ತರಲಾನಂದವು ಮಿಗಿಲು|| ಹರಿಸುವ ||೨||

(ವಚನ)

ಹೀಗೆ ಸಕಲ ಸಂಭ್ರಮದಿಂದಲೂ ಪುರದಲ್ಲಿ ಉತ್ಸವವನ್ನು ಬೆಳಗಿಸಿ, ನೂತನವಾಗಿ ಶೃಂಗರಿಸಲ್ಪಟ್ಟಿದ್ದ ಅರಮನೆಗೆ ಕರೆತಂದು, ಸುಮುಖೀ ಮಂದಪ್ರಜ್ಞರನ್ನು ಭದ್ರಾಸನದಲ್ಲಿ ಕುಳ್ಳಿರಿಸಿ, ಕನಕಾಭಿಷೇಕವನ್ನು ಮಾಡಿ, ಧನ್ಯವಾದದಿಂದ ಕೊಂಡಾಡುತ್ತ ನಿಂತಿರಲು, ಸುಮುಖಿಯು ಎಲ್ಲರೂ ನೋಡುನಂತೆಯೇ ಎದ್ದು ನಿಂತು, ಮೇಲೆ ನೋಡಿ ಕೈಮುಗಿದು "ಎಲೈ, ಜಗತ್ಪಿತನಾದ ಭಗವಾನ್ ದಿನನಾಥನೆ! ಭಕ್ತೆಳ ವ್ರತವನ್ನು ಸಾಂಗವೆನ್ನಿಸಿದ ನಿನಗಿದೆ-ಕೋಟಿ ಕೋಟಿ ವಂದನೆಗಳು. ನೀನಿನ್ನು ನಿನ್ನ ಕರ್ತವ್ಯವನ್ನು ಗಮನಿಸಬೇಕೆಂದು ಕೋರುವೆನು. ಅನುಗ್ರಹಿಸು" ಎಂದು ಪ್ರಾರ್ಥಿಸಿ, ಪತಿಯ ಸೇವೆಗೆ ಸಿದ್ಧಳಾದಳು. ಕರ್ತವ್ಯತತ್ಪರನಾದ ದಿನನಾಥನು ಕೂಡ, ಯಾಮವೇದಿಕೆಯನ್ನುಳಿದು, ಮುಂದಕ್ಕಡಿಯಿಡಲಾರಂಭಿಸಿದನು. ಆಗ ಏನಾಯಿತೆಂದರೆ ||

||ಆರ್ಯಾ||

ಕುಸುಮ ಮಳೆಯ ತಾವ್ ಕರೆದರು | ಬಿಸುಜಾಂಬಕಿಗೊಲಿದಾ ವಿದ್ಯಾಧರರು|| ಎಸೆದವು ದುಂದುಭಿವಾದ್ಯವು | ದೆಸೆದೆಸೆಯೊಳು ಮೊಳಗಿದುದಾ ಘನಹೊಸಗೆ||೧|| ಭೂಸುರರಾಶಿರ್ವದಿಸಿದ| ರಾಸುಮುಖಿಯ ನತ್ಯುತ್ಸಾಹದಿ ನಲಿದು || ಭಾಸುರವದನೆಯರತಿ ಸಂ| ತೋಷದೊಳಾರತಿ ಯೆತ್ತಿದರಪರಂದು ||೨|| ಈಶವಿನುತ ಶೇಷಗಿರೀಶನ ದಾಸರೊಳಗ್ಗಳಿವರೆಂದು|| ವಾಸವ ಮುಖಸುರರೆಲ್ಲರು ಘೋಷಿಸಿದರೇನು ಧನ್ಯಳೊ ಸತಿಯೆಂದು||೩||

(ವಚನ)

ಹೀಗೆ ಸಕಲ ಸಂಭ್ರಮದಿಂದ ಸುರಭೂಸುರರೆಲ್ಲರೂ ಪುಷ್ಪ ವರ್ಷಗಳಿಂದಲೂ, ಮಂತ್ರಾಕ್ಷತೆಗಳಿಂದಲೂ, ಸ್ವಸ್ತಿವಾಚನಗಳಿಂದಲೂ ಸುಮುಖೀಮಂದಪ್ರಜ್ಞರನ್ನೂ, ಧರ್ಮಾತ್ಮರಾದ ದ್ಯುತಿಮಂತ ಶುಭಾಂಗಿ ಯರನ್ನೂ ಅಭಿನಂದಿಸುತ್ತಿರಲು, ಭೂಪಾಲಕುಲೋತ್ತಮನಾದ ದ್ಯುತಿ ಮಂತನು, ಸಮಸ್ತರನ್ನೂ ಉಚಿತಸನ್ಮಾನಗಳಿಂದ ಮನ್ನಿಸಿ ಬೀಳ್ಕೊಟ್ಟು, ಸುಮುಖಿಯನ್ನು ಪತಿಯೊಡನೆ ಅಲ್ಲಿಯೇ ಇರುವಂತೆ ಮಾಡಿ, ಸೇವಕ-ಸೇವಕಿಯರೇ ಮೊದಲಾದ ಸರ್ವ ಪ್ರಕಾರವಾದ ಸಹಾಯ ಸಾಧನ ಸಂಪತ್ತಿಗಳನ್ನು ಸಿದ್ಧಪಡಿಸಿ ಕೊಟ್ಟು, ಪತ್ನಿಯೊಡನೆ ತನ್ನ ಅರಮನೆಗೆ ತೆರಳಿದನಲ್ಲದೆ, ದಿನವೂ ಪ್ರಾತಸ್ಸಾಯಂಕಾಲಗಳಲ್ಲಿಯೂ ಸುಮುಖೀ ಸಂದರ್ಶನವನ್ನು ಹೊಂದಿಹೋಗುತ್ತ ಬಂದು, ಭಗವದನುಗ್ರಹಕ್ಕೆ ಪಾತ್ರ ನಾಗಿ, ಪುತ್ರ-ಮಿತ್ರ-ಪರಿವಾರದೊಡನೆ ಚಿರಕಾಲ ಸುಖವಾಗಿರುತ್ತಿದ್ದನು. ಸುಮುಖಿಯು ಕೂಡ, ಆಾಯನಿಂದನುಗೃಹೀತವಾದ ಅಷ್ಟೈಶ್ವರ್ಯವನ್ನು ಹೊಂದಿದ್ದರೆಯೂ. ತನ್ನ ಕರ್ತವ್ಯವಾದ ಪತಿಸೇವೆಯಲ್ಲಿ ಅಲಸಿಕೆ ಹೊಂದದೆ, "ಪತಿಸೇವಾ ಕುಲವಧೂ ಶರಣಮ್" "ಪತ್ಯು ರ್ನಾನ್ಯತ್ ಪರಮಿಹ"ಎಂಬ ಸೂಕ್ತಿಯಂತೆ ಸತೀಕರ್ತವ್ಯದಲ್ಲಿ ನಿರತ ವ್ರತಳಾಗಿ, ಚಿರಕಾಲ ಪತಿಯೊಡನೆ ಸುಖಿಸುತ್ತಿದ್ದು, ತನ್ನ ಯಶಶ್ಶರೀರ ವನ್ನು ಆಚಂದ್ರಾರ್ಕವಾಗಿರುವಂತೆ ಮಾಡಿ, ಆ ಬಳಿಕ ಪರಂಧಾಮನಪಾ ದಾರವಿಂದದಲ್ಲಿ ಐಕ್ಯವಾದಳು.

ಅತ್ತಿಗೆ! ಸುಮುಖಿಯ ತಪಸಿ ಪ್ರಭಾವವನ್ನು ಚನ್ನಾಗಿ ಕೇಳಿತಿಳಿದೆಯೊ? ಇವಳಿಗೂ ಹೆಚ್ಚಾದ ಅದ್ಭುತ ಪ್ರಭಾವವುಳ್ಳ ಮಹಿಳಾಮಣಿಯರು ನಮ್ಮ, ಭಾರತಮಾತೆಯ ಗರ್ಭದಲ್ಲಿ ಹುಟ್ಟಿದ್ದು-ಮುಂದೆಯೂ ಹುಟ್ಟುತ್ತಿರುವರು. ಅಂತಹರ ನಾಮಸ್ಮರಣೆಯೇ ನಮ್ಮನ್ನು ಪವಿತ್ರರನ್ನಾಗಿ ಮಾಡಬಲ್ಲದೆಂಬಲ್ಲಿ, ಅವರ ಮಾ

ರ್ಗಾನುಸರಣೆಯಿಂದಾಗುವ ಮಹತ್ವವನ್ನು ಹೇಳಬೇಕೆ? ಸತ್ಯಭಾಮಾ! ನೀನು ವಶೀಕರಣೋಪಾಯವನ್ನು ಕೇಳಿದೆಯಲ್ಲಾ! ಅದರ ಹಾನಿ ಯೆಷ್ಟೆಂಬುದನ್ನು ತಿಳಿಯಲಿಲ್ಲವೆ ? ಮಣಿಮಂತ್ರ, ಮದ್ದು ಮಾಟಗಳಿಂದ ಪತಿಯ ಮನಶ್ಶಕ್ತಿ, ಮೇಧಾಶಕ್ತಿ, ಜೀರ್ಣಶಕ್ತಿಗಳನ್ನೇ ಕುಂದಿಸಿ, ಕೆಟ್ಟ ಜಾಡ್ಯಕ್ಕೆಡೆ ಮಾಡಿಕೊಟ್ಟು, ಅಂತದರಿಂದ ಅವನು ಅತ್ಯಲ್ಪಕಾಲ ದಲ್ಲಿಯೇ ಅಪಮೃತ್ಯು ಮುಖದಲ್ಲಿ ಬೀಳುವಂತೆ ಮಾಡುವ ದುರ್ನಾರಿ ಯರ,- ಆ ಹೆಮ್ಮಾರಿಯರ ಮಾತನ್ನು ಕಿವಿಯಿಂದಲಾದರೂ ಕೇಳಬಹುದೆ? ಪತಿಗೆ ಮೊದಲು ತಾನೇ ತಿಂದು, ಪತಿಯಿದಿರೆ ಕಾಲುಚಾಚಿ ಕುಳಿತು, ಪರುಷವಾಕ್ಯಗಳಿಂದ ಪತಿಯನ್ನು ನಿಂದಿಸುವ ಮತ್ತಯುವತಿಯ ರನ್ನು ಮನದಲ್ಲಿಯಾದರೂನೆನೆಯಬಹುದೋ? ಹೇಳು, ಭಾಮಾ! ಇನ್ನಾ ದರೂ, ನಿನ್ನ ಆ ಹುಚ್ಚಾಟವನ್ನು ಬಿಟ್ಟು, ಪರಮಾತ್ಮನೆಂದೇ ದೃಢವಾಗಿ ನಂಬಿ, ಸೇವಿಸಬೇಕೆಂದು ಸಾರಿಸಾರಿ ಹೇಳುವೆನು-ಕೇಳು! ಈ ಸುಮು ಖಿಯ ಪುಣ್ಯಚರಿತ್ರೆಯನ್ನು ಕೇಳಿದರೆ---

ರಾಗ|| ಜಂಪೆ||

ಪರಮಪಾವನವೀಪುಣ್ಯ—ಚರಿತೆಯನು ಭಕ್ತಿಯಲಿ | ಬರೆದೋ ದಿಕೇಳುವರೆ ನೆರೆಧನ್ಯರಿಳೆಯಲ್ಲಿ || ಪ || ಇತಿಕರ್ತವ್ಯಸ್ಫೂರ್ತಿಯಿಂದಲೆ ಚ್ಚೆತ್ತು | ಅತಿಶಯಿತಸತ್ಕೀರ್ತಿ ಯುತರಾಗುವರರಿವಾಂತು ||೧|| ವರಶೇ ಷಗಿರಿದೊರೆಯ ಶರಣರಿಗೆ ಸರಿಯುಂಟೆ || ತರುಣಿಮಣಿಕೇಳೆನ್ನ—ಅರಿವಿ ದ್ದುದಿನಿತೊರೆದೆ ||

(ವಚನ)

ಹೀಗೆ ದ್ರೌಪದಿಯು ಹೇಳಲು, ಅದನ್ನು ಕೇಳಿ ಸತ್ಯಭಾಮೆಯು-

||ಕಂದ|| ನಾದಿನಿ, ನೀನರುಹಿದ ಈ-ಸಾಧ್ವೀಕುಲಮಣಿ ಚರಿತೆಯ ಕೇಳಿದ

ಕಕದಿಂ || ನಾಂ ಧನ್ಯತೆಯಾಂತೆನಮಮ | ಸಾಧ್ವೀಮಣಿನೀನೊಲಿದೆನಗೊರೆದೆಯೆ ದಯೆಯಿಂ ||

(ವಚನ)

ಹೀಗೆ ಅಭಿನಂದಿಸಿ, ಉಳಿದ ಸಾಧ್ವಿಯರ ಚರಿತೆಗಳನ್ನೂ ಕೇಳಿ, ದುರಭಿಮಾನವನ್ನು ಬಿಟ್ಟು, ನಿಷ್ಕಲ್ಮಷಭಾವದಿಂದ ಪತಿಸೇವೆಯಲ್ಲಿ ಬದ್ಧಾಧರಳಾಗಿ ನಿಂತಳು. ಶ್ರೀ ಕೃಷ್ಣಭಗವಂತನೂ ಪತ್ನಿಯ ಪರಿಪಕ್ವ ಬುದ್ಧಿಯಿಂದ ಪಾತಿವ್ರತ್ಯಧರ್ಮವನ್ನು ಹಿಡಿದುದನ್ನು ನೋಡಿ ತೃಪ್ತನಾಗಿ, ದ್ರೌಪದಿಯನ್ನು ಆಶೀರ್ವದಿಸಿ, ಎಲ್ಲರಿಂದನುಮತಿಹೊಂದಿ, ತಂಗಿಯಾದ ಸುಭದ್ರೆಯನ್ನೂ, ಅಳಿಯನಾದ ಅಭಿಮನ್ಯುವನ್ನೂ ಜತೆಗೊಂಡು ದ್ವಾರಕಾಪುರಕ್ಕೆ ತೆರಳಿದನು.

ಭಕ್ತೋತ್ತಮರಾದ ಪಾಂಡವರೂ ಸತಿಯೊಡನೆ, ಸದ್ಭಾವನಾಯೋಗ ಬಲದಿಂದ ಅರಣ್ಯವಾಸದ ಕ್ಲೇಶವನ್ನು ದಾಟಿ, ಅಜ್ಞಾತವಾಸದ ಆಯಾಸವನ್ನೂ ಪರಿಹರಿಸಿಕೊಂಡು, ಪರಮಾತ್ಮನ ಪ್ರಭಾವದಿಂದ ಯುದ್ಧದಲ್ಲಿ ಕೌರವರನ್ನು ಸೋಲಿಸಿ, ರಾಜ್ಯವನ್ನು ಮತ್ತೆ ಪಡೆದು, ಸಕಲವಿಧವಾದ ಸುಖ, ಭೋಗ, ಸಂಪತ್ತಿಯಿಂದಲೂ, ಯಜ್ಞ, ಯಾಗ. ದಾನ, ಜಪತಪಾದಿಗಳಿಂದಲೂ, ದಾನ, ಧರ್ಮ, ಪರೋಪಕಾರಾದಿಗಳಿಂದ ಬಹುಕಾಲ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನೆಂದು ಮಹಾಭಾರತ ಪುರಾಣವು ಸಾರಿಸಾರಿ ಹೇಳುತ್ತಿದೆಯಲ್ಲವೆ? ಮನಸ್ಸೇ! ಮನಸ್ಸೇ!! ಈಗಹೇಳು ; ದ್ರೌಪದಿಯು ಪರಮಾತ್ಮನನ್ನು ಸುಪ್ರಸನ್ನನಾಗಿ ಮಾಡಿಕೊಂಡಿದ್ದುದು ಏತರಿಂದ? ಭಕ್ತಿ, ಶ್ರದ್ಧೆ, ಸತ್ಯ, ಕ್ಷಮೆ, ಶಾಂತಿಯೇ ಮೊದಲಾದ ಇತಿ ಕರ್ತವ್ಯತಾಜ್ಞಾನದಿಂದಲ್ಲವೇ? ನೋಡು, ಸುಮುಖಿಯ ಅಷ್ಟು ಪ್ರಾರ್ಥನೆಗಳನ್ನೂ ಸಾಫಲ್ಯ ಗೊಳಿಸಿಕೊಳ್ಳಬೇಕಾದ ಅಗತ್ಯವು ಪರಮಾತ್ಮನಿಗೇ ಗೊತ್ತು ? ಅವ್ಯಾಜಮನೋಹರ ಪ್ರೇಮಮಯವಾ

ದ ಆತನ ಚಿತ್ತವು, ಸುಮುಖಿಯ ಭಕ್ತಿಯೋಗಕ್ಕೆ ಕಟ್ಟು ಬಿದ್ದುದೊ
ಅಲ್ಲವೆ?

ಈಗಲಾದರೂ ತಿಳಿಯಲಾಯಿತೇ? ಮನಸ್ಸೇ! ಹರಿಭಕ್ತರಿಗೆ
ದಾದುದೇ ಇರುವುದಿಲ್ಲವೆಂದು! ಹಾಗಾದರಿನ್ನು ವಿಳಂಬಿಸುವೆ ಯ
ಹರಿ ಭಕ್ತನಾಗಲು, ಆ 'ಭಕ್ತಿ' ಎಂಬ ಅವಲಂಬವನ್ನು ಹೊಂದಿಸ
ಆ ಶ್ರೀ ಹರಿನಾಮತಾರಕ ಮಂತ್ರವನ್ನು ಬಿಡದೆ, ಕಡೆಗಣಿಸದೆ,
ಯದೆ, ಜರಿಯದೆ, ಅಡಿಗಡಿಗೂ ಜಪಿಸಿ ಜಪಿಸಿ, ನವಶಕ್ತಿ ಪ್ರಕಾಶ
ಆತನ ಕಟಾಕ್ಷವನ್ನು ಸಾಕ್ಷಾತ್ಕರಿಸಿಕೊಳ್ಳಲು ಮೊದಲುಮಾ
ಆಗಲಿ, ಹಾಡು ಹಾಡು; ಮಂಗಳ ಪ್ರದನಾದ ಮಾಧವನನ್ನು ವ
ಣಿಯೆ, ಮಂಗಳ ಗೀತೆಯಿಂದ ಹಾಡು ಹಾಡು—

## ಮಂಗಳಂ.

ರಾಗ|| (ಮಂಗಳಂ ಶ್ರೀಕೃಷ್ಣರಾಯಗೆ)

ಮಂಗಳಂ ಶ್ರೀನರಸಿಂಹಗೆ |ಜಯ| ಮಂಗಳಂ ಪ್ರಹ್ಲಾದವರ
||ಪಲ್ಲವಿ|| ತರಳನು ಮೊರೆಯಿಡೆ | ಭರದಿ ಕಂಬದಿ ಬಂದೆ | ದುರ
ಸದೆವಡೆದು | ಕರುಳನು ಧರಿಸಿ || ಧರಣಿಗಚ್ಚರಿಯೆನೆ | ತರಳನ ಮ
ಸಿರಿಯೊಡ ಗೂಡಿದ | ನರಕೇಸರಿಗೆ | ಮಂಗಳಂ ||

ತ್ರಿಜಗತ್ಪಿತ ನಿನ್ನ ನಿಜಪಾದಾಂಬುಜವನ್ನೆ ಭಜಿಸುವೆನೋ
ಗಜರಾಜವರದ | ಸುಜನರಸಂಗತಿಗೆರಗುವೊಲ್ ಚರುಣಿಸ್ಯೆ | ಗಜಾ
ಕ್ಷೇತ್ರ ವಿರಾಜಿತನೆ || ಮಂಗಳಂ || ೨ || ದೋಷನಿವಾರಣ ಶೇಷ
ಶನ ದಾಸರ ಬಿಡೆನೆಂದು ಘೋಷಿಸುತೆ || ವಾಸವಾದ್ಯಮರರ ಪೋ
ತಿರುವ ಲಕ್ಷ್ಮೀಶ ಕೇಶವ ನಿನಗೆರಗುವೆನ್ನೈ || ಮಂಗಳಂ || ೩ ||



